**ಪ್ರಮಾಣೀಕೃತ ಘೋಷಣೆ**

ಈ ಮೇಲೆ ನನ್ನಿಂದ ಒದಗಿಸಿದ ಮಾಹಿತಿ/ವಿವರಣೆಯು ನಾನು ತಿಳಿದಿರುವಷ್ಟರ ಮಟ್ಟಿಗೆ ಸತ್ಯವೆಂದು ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ ಮತ್ತು ಘೋಷಿಸುತ್ತೇನೆ.

ಸ್ಥಳ : ತಮ್ಮ ವಿಧೇಯ,

ದಿನಾಂಕ : (ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ, ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ತಂದೆ/ತಾಯಿ/ಪೋಷಕರ ಸಹಿ,
(ತಂದೆ/ತಾಯಿ/ಜೀವಂತವಿಲ್ಲದಿದ್ದರೆ)
(ಹೆಂಡತಿ/ಗಂಡ/ಇವರ ಸಹಿ)

**ಸ್ಥಳೀಯ ಇಬ್ಬರು ಸಾಕ್ಷೀದಾರರು:**

ಅಭ್ಯರ್ಥಿಯು ಮತ್ತು ತಂದೆ/ತಾಯಿ/ಪೋಷಕರು/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ಗುರುತಿಸುತ್ತೇನೆ.

ಸಾಕ್ಷಿದಾರರ ಸಹಿ: 1)

2)

(ಪೂರ್ಣ ವಿಳಾಸದೊಂದಿಗೆ)

---

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ ____________ಎಂಬುವವರ ಮಗ/ಮಗಳು/ಪತಿ/ಪತ್ನಿ ಶ್ರೀ/ಶ್ರೀಮತಿ/ ಕುಮಾರಿ____________ಎಂಬುವವರು ಕರ್ನಾಟಕ ರಾಜ್ಯದ ____________ಜಿಲ್ಲೆಯ ವಿಭಾಗ ____________ಗ್ರಾಮ/ಪಟ್ಟಣ ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆಂದು ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

ಶ್ರೀ/ಶ್ರೀಮತಿ/ಕುಮಾರಿ ____________ಇವರ ತಂದೆ/ತಾಯಿ/ ಪೋಷಕರು ಸರ್ಕಾರಿ ಅದೇಶ ಸಂಖ್ಯೆ:ಎಸ್‌ಡಬ್ಲೂಡಿ 251 ಬಿಡಿಎ 94, ಬೆಂಗಳೂರು, ದಿನಾಂಕ 31–01–1995ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (creamy layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ: ತಹಸೀಲ್ದಾರರು

ದಿನಾಂಕ: ____________ತಾಲ್ಲೂಕು

ಕಛೇರಿಯ ಮೊಹರು.

---

**ಸೂಚನೆ–1:** ಇದರಲ್ಲಿ ಉಪಯೋಗಿಸಲಾದ "ಸಾಮಾನ್ಯ ನಿವಾಸಿ " ಎಂಬ ಪದವು 1950ರ ಜನತಾ ಪ್ರಾತಿನಿಧ್ಯ ಕಾಯಿದೆಯ 20ನೇ ಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ.

**ಸೂಚನೆ–2:** ಪರಿಶೀಲನಾ ಪ್ರಮಾಣ ಪತ್ರ ನೀಡುವ ಅಧಿಕೃತ ಅಧಿಕಾರಿಯು ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ:31–01–1995ರನ್ವಯ ಮೇಲುಸ್ತರ (creamy layer) ದರವನ್ನು ಗುರುತಿಲು ನಿಗದಿಪಡಿಸಲಾಗಿರುವ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು.

**(ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ)**

**ನಮೂನೆ–2**

ಶ್ರೀ/ಶ್ರೀಮತಿ____________ರವರ ಮಗ/ಮಗಳು/ಪತಿ/ಪತ್ನಿ ಶ್ರೀ/ಶ್ರೀಮತಿ ಕುಮಾರಿ ____________ ಜಿಲ್ಲೆ ____________ತಾಲ್ಲೂಕು ____________ಗ್ರಾಮದಲ್ಲಿ ____________ವಾಸವಾಗಿರುವ ಇವರು ಒಂದನೇ ತರಗತಿಯಿಂದ ____________ ತರಗತಿಯವರೆಗೆ ________ ಜಿಲ್ಲೆ ________ ತಾಲ್ಲೂಕು ________ ಪಟ್ಟಣ ಶಾಲೆಯಲ್ಲಿ ವ್ಯಾಸಂಗ ಮಾಡಿ ________ ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯು ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕದ ಪೌರನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

(ಸಹಿ)
ಮುಖ್ಯೋಪಾಧ್ಯಾಯರು.
ಮೇಲುರುಜು
ಕ್ಷೇತ್ರ ಶಿಕ್ಷಣ ಅಧಿಕಾರಿ

---

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೆನಿ 2001 ದಿನಾಂಕ:27–07–2001

**(ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ ಪ್ರಮಾಣ ಪತ್ರ)**

**ನಮೂನೆ**

**ಸರ್ಕಾರಿ ಆದೇಶ ಡಿಪಿಎಆರ್/23/ಎಸ್ಆರ್ಆರ್93 ದಿ:23/11/2000**

ಶ್ರೀ/ಶ್ರೀಮತಿ ---------------- ಎಂಬುವವರ ಮಗ/ಮಗಳು/ಪತಿ/ಪತ್ನಿ ಶ್ರೀ/ಶ್ರೀಮತಿ/ ಕುಮಾರಿ ------- ಜಿಲ್ಲೆ -------------- ತಾಲ್ಲೂಕು ----------- ಗ್ರಾಮದಲ್ಲಿ ----------- ವಾಸವಾಗಿರುವ ಇವರು : ;ಇವರ ಕುಟುಂಬದವರು ಅವಲಂಬಿತರಾಗಿದ್ದ ಈ ಕೆಳಕಂಡ ಆಸ್ತಿಯನ್ನು ---------------- ಯೋಜನೆಗಾಗಿ -----------------ಇಸವಿ-----------ಯಂದು ಸ್ವಾಧೀನಪಡಿಸಿಕೊಳ್ಳಲಾಗಿದೆ. ಎಂದು ಈ ಮೂಲಕ ಪ್ರಮಾಣೀಕರಿಸಿದೆ:-

- ವಾಸಿಸುವ ಮನೆ ಮತ್ತು ತಾವು ಅವಲಂಬಿರಾಗಿದ್ದ ಅವರ ಕೃಷಿ ಭೂಮಿಯ ಅರ್ಧದಷ್ಟು:
- ಯೋಜನೆಗೆ ಮೊದಲು ಭೂಮಿಯನ್ನು ಹೊಂದಿರದೆ : ಯೋಜನೆಯಿಂದ ತಾವು ವಾಸಿಸುವ ಮನೆ:
- ತಾವು ಅವಲಂಭಿತರಾಗಿದ್ದ ತಮ್ಮ ಕೃಷಿ ಭೂಮಿಯ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಕೃಷಿ ಭೂಮಿ:
- ಇತರ ಇನ್ನಾವುದೇ ಪ್ರಕರಣದಲ್ಲಿ ಯೋಜನೆಯಿಂದ ನಿರ್ವಸಿತರಾದವರು

ತಹಸೀಲ್ದಾರ್

---------ತಾಲ್ಲೂಕು

(ಅನ್ವಯವಾಗುವ ಐಟಂನ್ನು ಮಾತ್ರ ಪ್ರಮಾಣ ಪತ್ರದಲ್ಲಿ ನಮೂದಿಸತಕ್ಕದ್ದು.)

**(ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ)**

**ನಮೂನೆ**

ಶ್ರೀ/ಶ್ರೀಮತಿ________________ ರವರ ಮಗ/ಮಗಳು/ಪತ್ನಿ ಶ್ರೀ/ ಶ್ರೀಮತಿ ಕುಮಾರಿ ____________ಜಿಲ್ಲೆ ____________ ತಾಲ್ಲೂಕು ______ ಗ್ರಾಮದಲ್ಲಿ ____________ವಾಸವಾಗಿರುವ ಇವರು ____________ತರಗತಿಯಿಂದ ____________ತರಗತಿಯವರೆಗೆ ____________ಶೈಕ್ಷಣಿಕ ವರ್ಷದಿಂದ ____________ ಶೈಕ್ಷಣಿಕ ವರ್ಷದವರೆಗೆ ____________ ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದೂ ಪ್ರಮಾಣೀಕರಿಸಲಾಗಿದೆ.

ಮುಖ್ಯೋಪಾಧ್ಯಾರ ಸಹಿ ಮತ್ತು ಸಂಸ್ಥೆಯ ಮೊಹರು.

ದಿನಾಂಕ: ____________

ಸ್ಥಳ :____________

**ಸೂಚನೆ :-** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಶಾಲೆಗಳಲ್ಲಿ ವ್ಯಾಸಂಗ ಮಾಡಿದ್ದಲ್ಲಿ ಶಾಲಾವಾರು ಪ್ರತ್ಯೇಕ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಸಲ್ಲಿಸಬೇಕು.

ಪಿಡಿ-45

**ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು**

**ಅಧಿಸೂಚನೆ**

**ಸಂಖ್ಯೆ: ಲೆಕ್ಕ(2)ಎಂಟಿ/05/2005-2006, ದಿನಾಂಕ: 05/03/2011**

**ವಿಷಯ:** ಈ ಘಟಕದ ನಿರುಪಯುಕ್ತಗೊಳಿಸಿದ ವಾಹನಗಳನ್ನು ಟೆಂಡರ್ ಕಮ್ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ/137/ಶಿವಾನೀ/2010 ದಿನಾಂಕ: 11/01/2001.

2) ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ/16/ಇಎಂವಿ/2010 ದಿನಾಂಕ: 02/02/2011.

3) ಪ್ರಧಾನ ಕಛೇರಿಯ ಆದೇಶ ಸಂಖ್ಯೆ: ವಾಸಾ(1)40/2009-10 ದಿ: 21/02/2011.

ಮೇಲಿನ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖ-(3)ರ ಆದೇಶದ ಅನ್ವಯ, ನಿರುಪಯುಕ್ತಗೊಳಿಸಿದ ತುಮಕೂರು ಜಿಲ್ಲಾ ಪೊಲೀಸ್ ಇಲಾಖೆಯ ಈ ಕೆಳಕಂಡ ವಾಹನಗಳನ್ನು ತುಮಕೂರಿನ ಬಟವಾಡಿಯಲ್ಲಿರುವ ಡಿ.ಎ.ಆರ್. ಕಛೇರಿ ಆವರಣದಲ್ಲಿ **ದಿನಾಂಕ: 19/04/2011 ರಂದು ಬೆಳಿಗ್ಗೆ 11-00 ಗಂಟೆಗೆ** ಟೆಂಡರ್ ಕಮ್ ಬಹಿರಂಗ ಹರಾಜು ಮಾಡಲು ನಿಗದಿಪಡಿಸಲಾಗಿದೆ. ಆದ್ದರಿಂದ, ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಿ, ವಾಹನಗಳನ್ನು ಖರೀದಿಸಬಹುದಾಗಿರುತ್ತದೆ.

**ಹರಾಜು ವಾಹನಗಳ ವಿವರಗಳು**

| ಕ್ರ.ಸಂ. | ವಾಹನ ನೋಂದಣಿ ಸಂಖ್ಯೆ | ಮಾದರಿ | ತಯಾರಿಕಾ ವರ್ಷ |
|---|---|---|---|
| 1 | ಕೆಎ-06-ಜಿ-137 | ಮಹೀಂದ್ರಾ ಕಮಾಂಡರ್ ಜೀಪ್ | 1996 |
| 2 | ಕೆಎ-06-ಜಿ-73 | ಮಹೀಂದ್ರಾ ಕಮಾಂಡರ್ ಜೀಪ್ | 1993 |

| ಕ್ರ.ಸಂ. | ವಾಹನ ನೋಂದಣಿ ಸಂಖ್ಯೆ | ಮಾದರಿ | ತಯಾರಿಕಾ ವರ್ಷ |
|---|---|---|---|
| 3 | ಕೆಎ–06–ಜಿ–87 | ಮಹೀಂದ್ರಾ ಕಮಾಂಡರ್ ಜೀಪ್ | 1994 |
| 4 | ಕೆಎ–06–ಜಿ–88 | ಮಹೀಂದ್ರಾ ಕಮಾಂಡರ್ ಜೀಪ್ | 1994 |
| 5 | ಕೆಎ–06–ಜಿ–89 | ಮಹೀಂದ್ರಾ ಕಮಾಂಡರ್ ಜೀಪ್ | 1994 |
| 6 | ಕೆಎ–06–ಜಿ–90 | ಮಹೀಂದ್ರಾ ಕಮಾಂಡರ್ ಜೀಪ್ | 1994 |
| 7 | ಕೆಎ–06–ಜಿ–91 | ಮಹೀಂದ್ರಾ ಕಮಾಂಡರ್ ಜೀಪ್ | 1994 |
| 8 | ಕೆಎ–06–ಜಿ–112 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1995 |
| 9 | ಕೆಎ–06–ಜಿ–113 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1995 |
| 10 | ಕೆಎ–06–ಜಿ–114 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1995 |
| 11 | ಕೆಎ–06–ಜಿ–115 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1995 |
| 12 | ಕೆಎ–06–ಜಿ–1971 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1995 |
| 13 | ಕೆಎ–06–ಜಿ–270 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 2000 |
| 14 | ಕೆಎ–06–ಜಿ–160 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1997 |
| 15 | ಕೆಎ–06–ಜಿ–254 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 1999 |
| 16 | ಕೆಎ–06–ಜಿ–295 | ಎನ್‌ಫೀಲ್ಡ್ ಮೋಟಾರ್ ಸೈಕಲ್ | 2001 |

ಮೇಲ್ಕಂಡ ವಾಹನಗಳನ್ನು ಖರೀದಿಸಲು ಟೆಂಡರ್ ಕಮ್ ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗೊಳ್ಳಪಟ್ಟಿರಬೇಕಾಗಿರುತ್ತದೆ.

**ಟೆಂಡರ್ / ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ರವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ಪೊಲೀಸ್ ವಾಹನದ ಖರೀದಿ ಬಗ್ಗೆ ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು/ಬಿಡ್‌ದಾರರು ಪ್ರತಿ ವಾಹನದ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ ರೂ.2,000=00 ಗಳನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ರವರ ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು. ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೇ ಕಳುಹಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ, ಟೆಂಡರ್‌ದಾರರು ಪೂರ್ಣ ಸಹಿಯೊಂದಿಗೆ ದೃಢೀಕರಿಸಿರಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ಗಳನ್ನು **ದಿನಾಂಕ: 18/04/2011 ರಂದು ಸಂಜೆ 5–00 ಗಂಟೆಯೊಳಗೆ** ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರೂ ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೇ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
7. ಜಿಲ್ಲಾ ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿ ತುಂಬಿದ ಟೆಂಡರ್/ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ, ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್/ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡಾ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಪಾವತಿಸಬೇಕು. ಉಳಿದ ಹಣವನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಅನುಮೋದಿಸಿದ ನಂತರ ಪಾವತಿ ಮಾಡಿ, ಒಂದು ತಿಂಗಳೊಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕು. ತಪ್ಪಿದರೆ, ಮುಂಗಡವಾಗಿ ಪಾವತಿಸಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಪೂರ್ಣ ಮೊತ್ತವನ್ನು ತುಮಕೂರು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್/ಸವಾಲುದಾರರು ಹರಾಜು ಮುಗಿದ ನಂತರ, ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

12. ಹರಾಜು ಮಾಡಲಾದ ವಾಹನದ ಮೌಲ್ಯಕ್ಕೆ ನಿಯಮಾನುಸಾರ ವಾಹನವನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.
13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರ ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ, ಅಂತಹ ಟೆಂಡರ್/ಸವಾಲುದಾರರು ಮುಂಗಡವಾಗಿ ಪಾವತಿಸಿದ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನುಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
14. ಹರಾಜಿನ ಯಾವುದೇ ಟೆಂಡರ್/ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ/ ತಿರಸ್ಕರಿಸುವ ಅಧಿಕಾರವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ರವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15. ಮೇಲ್ಕಂಡ ಟೆಂಡರ್/ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ, ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
16. ಹರಾಜು ಮಾಡಲಿರುವ ನಿರುಪಯುಕ್ತ ವಾಹನಗಳನ್ನು ತುಮಕೂರಿನ ಬಟವಾಡಿಯಲ್ಲಿರುವ ಡಿ.ಎ.ಆರ್. ಕಛೇರಿ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಡಿ.ಎಸ್.ಪಿ., ಡಿಎಆರ್, ತುಮಕೂರು ರವರನ್ನು ಸಂಪರ್ಕಿಸಿ, ಪರಿಶೀಲನೆ ಮಾಡಿ, ಹರಾಜಿನಲ್ಲಿ ಭಾಗವಹಿಸಿ, ವಾಹನವನ್ನು ಕೊಳ್ಳಬಹುದು.

**ಟೆಂಡರ್ ಫಾರಂನ ನಮೂನೆ**

**ನಿರುಪಯುಕ್ತ ವಾಹನಗಳಿಗೆ ಟೆಂಡರ್**

**ಗೆ:– ಪೊಲೀಸ್ ಅಧೀಕ್ಷಕರು,**
**ತುಮಕೂರು ಜಿಲ್ಲೆ, ತುಮಕೂರು.**

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸೂಚನೆ ಸಂಖ್ಯೆ: ಲೆಕ್ಕ(2)ಎಂಟಿ/5/2005–2006 ದಿನಾಂಕ: 05/03/2011 ರಲ್ಲಿ ತಿಳಿಸಿದ ನಿರುಪಯುಕ್ತ ವಾಹನಗಳನ್ನು ರೂ. (ಅಕ್ಷರಗಳಲ್ಲಿ ) ಗಳಿಗೆ ಖರೀದಿಸಲು ಒಪ್ಪಿರುತ್ತೇನೆ.

ಸ್ಥಳ :
ತಮ್ಮ ವಿಶ್ವಾಸಿ,
ದಿನಾಂಕ :

(ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ)

---

ಪಿ.ಆರ್.113

ಪೊಲೀಸ್ ಅಧೀಕ್ಷಕರು,
ತುಮಕೂರು ಜಿಲ್ಲೆ, ತುಮಕೂರು.

**ಕರ್ನಾಟಕ ಸರ್ಕಾರ**

**ಲೋಕೋಪಯೋಗಿ ಇಲಾಖೆ,**

**ಕಾರ್ಯಪಾಲಕ ಅಭಿಯಂತರವರ ಕಛೇರಿ ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಚಿತ್ರದುರ್ಗ.**

**ಟೆಂಡರ್ ಪ್ರಕಟಣೆ ಸಂಖ್ಯೆ: ಕಾಪಾಅ:ಲೋಇ:ಚಿವಿ:ಕಟ್ಟಡಗಳು:ಟೆಂಡರ್–20:2010–11 ದಿನಾಂಕ: 14–03–2011**

**ಇ–ಟೆಂಡರ್ ಪ್ರಕಟಣೆ**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅದ್ಯಾದೇಶ 2000 ಹಾಗೂ ಆಕ್ಟ್ 2000 ರ ಪ್ರಕಾರ ಸ್ಟ್ಯಾಂಡರ್ಡ್ ಟೆಂಡರ್ ಡಾಕ್ಯುಮೆಂಟ್‌ಗಳ ನಿಯಮಗಳನ್ವಯ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಚಿತ್ರದುರ್ಗ ಇವರಿಂದ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಒಂದನೇ ದರ್ಜೆ ಗುತ್ತಿಗೆದಾರರಿಂದ ಇ–ಪ್ರೊಕ್ಯೂರಮೆಂಟ್ ಪೋರ್ಟಲ್ ಮುಖಾಂತರ ಈ ಕೆಳಕಂಡ ಕೋಷ್ಟಕದಲ್ಲಿ ನಮೂದಿಸಿದ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಗಳನ್ನು ಏಕ ಲಕೋಟೆ ಮತ್ತು ದ್ವಿ ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಆಹ್ವಾನಿಸಲಾಗಿದೆ.

ಟೆಂಡರ್‌ದಾರರು ಕಾಮಗಾರಿಗೆ ಅವಶ್ಯಕವಿರುವ ಗುತ್ತಿಗೆದಾರರ ಕನಿಷ್ಠ ಅರ್ಹತೆ ಬಗ್ಗೆ ಸ್ಟ್ಯಾಂಡರ್ಡ್ ಟೆಂಡರ್ ಡಾಕ್ಯುಮೆಂಟ್‌ನ ನಿಯಮ–3 ಮತ್ತು ಸೆಕ್ಷನ್–3 ರಲ್ಲಿ ತಿಳಿಸಿರುವಂತೆ, ಟೆಂಡರ್‌ಗೆ ಬೇಕಾಗಿರುವ ಮೌಲ್ಯವನ್ನು ನಿರ್ಧರಿಸಲಾಗುವುದು ಎಂಬುದರ ಬಗ್ಗೆ ತಪ್ಪದೇ ಗಮನಿಸಲು ತಿಳಿಸಿದೆ. ಅರ್ಹ ಗುತ್ತಿಗೆದಾರರು ವೆಬ್‌ಸೈಟ್ www.eproc.Karnataka.gov.in/eportal/index.seam ನಲ್ಲಿ ಟೆಂಡರ್‌ಗಾಗಿ ವಿವರಗಳನ್ನು ಪಡೆದು ಭಾಗವಹಿಸಬಹುದು.

ಟೆಂಡರ್ ದಾಖಲಾತಿಗಳನ್ನು ದಿನಾಂಕ 01–04–2011 ರಿಂದ 27–04–2011 ರವರೆಗೆ ಇ–ಪ್ರೊಕ್ಯೂರಮೆಂಟ್ ಪೋರ್ಟಲ್ ಮುಖಾಂತರ ಗಣಕ ಯಂತ್ರದಲ್ಲಿ ದಾಖಲೆಯಿಂದ ನಕಲು ತೆಗೆಯುವುದು (Down load) ಮಾಡಿಕೊಳ್ಳಬಹುದಾಗಿದೆ.

ಕಾಮಗಾರಿಗಳಿಗೆ ಕೆಳಕಂಡಂತೆ ನಿಗಧಿಪಡಿಸಿದ ಇ.ಎಂ.ಡಿ ಯನ್ನು ಇ–ಪ್ರೊಕ್ಯೂರಮೆಂಟ್ ಪೋರ್ಟಲ್ ನಲ್ಲಿ ನಮೂದಿಸಿದ ಯಾವುದಾದರು ಒಂದು ರೀತಿಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ ಯು ಟೆಂಡರಿನ ನ್ಯಾಯ ಸಮ್ಮತಾ ಮಾನ್ಯತಾ ಅವಧಿಗಿಂತ (Validity period) 45 ದಿನಗಳ ನಂತರದ ವರೆಗೆ ಮಾನ್ಯತೆ ಇರತಕ್ಕದ್ದು.

ಟೆಂಡರ್ ದಾಖಾಲಾತಿಗಳನ್ನು ದಿನಾಂಕ 27–04–2011 ರ 16.00 ಗಂಟೆಯವರೆಗೆ ಇ–ಪ್ರೊಕ್ಯೂರಮೆಂಟ್ ಪೋರ್ಟಲ್ ಮುಖಾಂತರ ಸಲ್ಲಿಸಬಹುದಾಗಿದೆ.

**ಕೋಷ್ಟಕ**

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರ್‌ಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ ಮೊತ್ತ (ರೂ. ಗಳಲ್ಲಿ) | ಕಾಮಗಾರಿಗಳನ್ನು ಪೂರ್ಣಗೊಳಿಸಲು ನಿಗಧಿಪಡಿಸಿದ ಕಾಲಾವಧಿ |
|---|---|---|---|---|
| | **ದ್ವಿ ಲಕೋಟೆ ಪದ್ಧತಿ** | | | |
| 1 | ಹೊಳಲ್ಕೆರೆಯಲ್ಲಿ ಸಿವಿಲ್ ನ್ಯಾಯಾಧೀಶರ (ಸೀನಿಯರ್ ಡಿವಿಜನ್) ನ್ಯಾಯಾಲಯ ಕಟ್ಟಡ ನಿರ್ಮಾಣ. | 950.00 | 1425000–00 | 18 ತಿಂಗಳು |
| | ಹೊಳಲ್ಕೆರೆಯಲ್ಲಿ ಪ್ರಧಾನ ಸಿವಿಲ್ ನ್ಯಾಯಾಧೀಶರು (ಜೂನಿಯರ್ ಡಿವಿಜನ್) ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ ಕಟ್ಟಡ ನಿರ್ಮಾಣ. | | | |
| | ಹೊಳಲ್ಕೆರೆಯಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಜೂನಿಯರ್ ಡಿವಿಜನ್) ನ್ಯಾಯಾಲಯ ಕಟ್ಟಡ ನಿರ್ಮಾಣ. | | | |
| 2 | ಚಳ್ಳಕೆರೆಯಲ್ಲಿ ಸಿವಿಲ್ ನ್ಯಾಯಾಧೀಶರ (ಸೀನಿಯರ್ ಡಿವಿಜನ್) ನ್ಯಾಯಾಲಯ ಕಟ್ಟಡ ನಿರ್ಮಾಣ. | 950.00 | 1425000–00 | 18 ತಿಂಗಳು |
| | ಚಳ್ಳಕೆರೆಯಲ್ಲಿ ಪ್ರಧಾನ ಸಿವಿಲ್ ನ್ಯಾಯಾಧೀಶರು (ಜೂನಿಯರ್ ಡಿವಿಜನ್) ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ ಕಟ್ಟಡ ನಿರ್ಮಾಣ. | | | |
| | ಚಳ್ಳಕೆರೆಯಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಜೂನಿಯರ್ ಡಿವಿಜನ್) ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ ಕಟ್ಟಡ ನಿರ್ಮಾಣ. | | | |
| 3 | ಹೊಸದುರ್ಗದಲ್ಲಿ ಸೀನಿಯರ್ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ ಕಟ್ಟಡ ನಿರ್ಮಾಣ. | 450.00 | 675000–00 | 12 ತಿಂಗಳು |
| 4 | ಚಿತ್ರದುರ್ಗದಲ್ಲಿ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | 200.00 | 300000–00 | 12 ತಿಂಗಳು |
| | ಚಿತ್ರದುರ್ಗದಲ್ಲಿ ಮೊದಲನೇ ಹೆಚ್ಚುವರಿ ಸೀನಿಯರ್ ಸಿವಿಲ್ ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |
| | ಚಿತ್ರದುರ್ಗದಲ್ಲಿ ಎರಡನೇ ಹೆಚ್ಚುವರಿ ಸೀನಿಯರ್ ಸಿವಿಲ್ ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |
| | ಚಿತ್ರದುರ್ಗದಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ, ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |
| | ಚಿತ್ರದುರ್ಗದಲ್ಲಿ ಫಾಸ್ಟ್ ಟ್ರ್ಯಾಕ್ ನ್ಯಾಯಾಲಯ, ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |
| 5 | ಚಳ್ಳಕೆರೆಯಲ್ಲಿ ಸೀನಿಯರ್ ಸಿವಿಲ್ ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | 130.00 | 200000–00 | 12 ತಿಂಗಳು |
| | ಚಳ್ಳಕೆರೆಯಲ್ಲಿ ಪ್ರಧಾನ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ, ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |
| | ಚಳ್ಳಕೆರೆಯಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ, ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |
| 6 | ಹೊಳಲ್ಕೆರೆಯಲ್ಲಿ ಸೀನಿಯರ್ ಸಿವಿಲ್ ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | 130.00 | 200000–00 | 12 ತಿಂಗಳು |
| | ಹೊಳಲ್ಕೆರೆಯಲ್ಲಿ ಪ್ರಧಾನ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ, ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |
| | ಹೊಳಲ್ಕೆರೆಯಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ, ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | | | |

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರ್‌ಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ ಮೊತ್ತ (ರೂ. ಗಳಲ್ಲಿ) | ಕಾಮಗಾರಿಗಳನ್ನು ಪೂರ್ಣಗೊಳಿಸಲು ನಿಗಧಿಪಡಿಸಿದ ಕಾಲಾವಧಿ |
|---|---|---|---|---|
| 7 | ಹಿರಿಯೂರಿನಲ್ಲಿ ಸೀನಿಯರ್ ಸಿವಿಲ್ ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ.<br>ಹಿರಿಯೂರಿನಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ವಸತಿ ಗೃಹ ನಿರ್ಮಾಣ. | 80.00 | 160000–00 | 9 ತಿಂಗಳು |
| | **ಏಕ ಲಕೋಟೆ ಪದ್ಧತಿ** | | | |
| 8 | ಹೊಸದುರ್ಗದಲ್ಲಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು ಮತ್ತು ಜೆ.ಎಮ್.ಎಫ್.ಸಿ. ನ್ಯಾಯಾಲಯ, ನ್ಯಾಯಾಧೀಶರ ವಸತಿ ಗೃಹ ನಿರ್ಮಾಣ. | 40.00 | 80000–00 | 9 ತಿಂಗಳು |

ಅರ್ಹ ಗುತ್ತಿಗೆದಾರರು ವೆಬ್ ಸೈಟ್ www.eproc.Karnataka.gov.in/eportal/index.seam ನಲ್ಲಿ ಟೆಂಡರ್‌ಗಾಗಿ ಭಾಗವಹಿಸಬಹುದು ಹಾಗೂ ವಿವರಗಳನ್ನು ಪಡೆಯಬಹುದಾಗಿದೆ.

**ಸೂಚನೆ:–** ಈ ಮೇಲ್ಕಂಡ ಕಾಮಗಾರಿಗಳ ಮುಂದೆ ನಮೂದಿಸಿದ ಟೆಂಡರ್‌ಗಿಟ್ಟ ಅಂದಾಜು ಮೊತ್ತ ಹಾಗು ಇ.ಎಂ.ಡಿ. ಯಲ್ಲಿ ಯಾವುದೇ ಬದಲಾವಣೆ ಇದ್ದಲ್ಲಿ ಟೆಂಡರ್ ದಾಖಲೆಯಲ್ಲಿ ನಮೂದಿಸಿದ ಟೆಂಡರ್‌ಗಿಟ್ಟ ಮೊತ್ತ ಮತ್ತು ಇ.ಎಂ.ಡಿ. ಮೊತ್ತವು ಅಂತಿಮವಾಗಿರುತ್ತದೆ.

**ನಿಬಂಧನೆಗಳು:–**

1. ಗುತ್ತಿಗೆದಾರರು ಸ್ಟ್ಯಾಂಡರ್ಡ್ ಟೆಂಡರ್ ಡಾಕ್ಯುಮೆಂಟ್ ಕ್ಲಾಸ್ 3 ಮತ್ತು ಸೆಕ್ಷನ್ 3 ರ ಅನ್ವಯ ವಿವರಗಳನ್ನು ನಿಗಧಿತ ನಮೂನೆಯಲ್ಲಿ ಮತ್ತು ನಿಗಧಿತ ರೀತಿಯಲ್ಲಿ ತಪ್ಪದೇ ಸಲ್ಲಿಸತಕ್ಕದ್ದು. ಹಾಗೂ ಷರತ್ತುಗಳನ್ನು ಪಾಲಿಸತಕ್ಕದ್ದು.
2. ಕ್ರಮ ಸಂಖ್ಯೆ 1 ರಿಂದ 6 ರ ಕಾಮಗಾರಿಗಳಿಗೆ ಭಾಗವಹಿಸುವ ಗುತ್ತಿಗೆದಾರರು ರೂ. 100000–00 ಇ.ಎಂ.ಡಿ ಯನ್ನು ಹಾಗೂ ಕ್ರಮ ಸಂಖ್ಯೆ 7 ರ ಕಾಮಗಾರಿಗೆ ಭಾಗವಹಿಸುವ ಗುತ್ತಿಗೆದಾರರು ರೂ. 50000–00 ಇ.ಎಂ.ಡಿ ಯನ್ನು ಮತ್ತು ಕ್ರಮ ಸಂಖ್ಯೆ 8 ರ ಕಾಮಗಾರಿಗೆ ಭಾಗವಹಿಸುವ ಗುತ್ತಿಗೆದಾರರು ಪೂರ್ಣ ಇ.ಎಂ.ಡಿ ಮೊತ್ತವನ್ನು ಇ–ಪ್ರೊಕ್ಯೂರಮೆಂಟ್ ನಡಿ ನಮೂದಿಸಿರುವ ಯಾವುದಾದರೂ ಒಂದು ವಿಧದಲ್ಲಿ ಇ–ಪ್ರೊಕ್ಯೂರಮೆಂಟ್ ಮುಖಾಂತರ ಸಲ್ಲಿಸಬೇಕಾಗಿದ್ದು, ಬಾಕಿ ಮೊತ್ತಕ್ಕೆ ರಾಷ್ಟ್ರೀಕೃತ ಷೆಡ್ಯೂಲ್ ಬ್ಯಾಂಕ್‌ನಿಂದ ಪಡೆದ ಬ್ಯಾಂಕ್ ಗ್ಯಾರಂಟಿಯನ್ನು ಸಲ್ಲಿಸಬಹುದಾಗಿದೆ. ಬ್ಯಾಂಕ್ ಗ್ಯಾರಂಟಿಯನ್ನು ಸ್ಕ್ಯಾನ್ ಮಾಡಿ ತಾಂತ್ರಿಕ ಬಿಡ್‌ನೊಂದಿಗೆ ಸಲ್ಲಿಸತಕ್ಕದ್ದು ಹಾಗೂ ಮೂಲ ಪ್ರತಿಯನ್ನು ತಾಂತ್ರಿಕ ಬಿಡ್ ತೆರೆಯುವ ಸಮಯಕ್ಕೆ ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಹೆಚ್ಚಿನ ವಿವರಗಳಿಗೆ ಸದರಿ ಕಛೇರಿಯಿಂದ ಹಾಗೂ ಹೆಚ್.ಪಿ. ಕಂಪನಿಯ ಸಹಾಯಕ ದೂರವಾಣಿ ಸಂಖ್ಯೆ 08022485867 ರಿಂದ ಮಾಹಿತಿ ಪಡೆಯಬಹುದು.

ಕಾರ್ಯಪಾಲಕ ಅಭಿಯಂತರರು
ಲೋಕೋಪಯೋಗಿ ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ ವಿಭಾಗ ಚಿತ್ರದುರ್ಗ.

ಪಿ.ಆರ್.135

**ಪೊಲೀಸ್ ಅಧೀಕ್ಷಕರವರ ಕಛೇರಿ, ಪೊಲೀಸ್ ವಾಹನ ಚಾಲನ ಮತ್ತು ಸಂರಕ್ಷಣಾ ಶಾಲೆ, ಯಲಹಂಕ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ:ಪಿಡಿಎಂಎಸ್/ಎಂ.ಟಿ/ಟೆಂಡರ್/2010–11. ದಿನಾಂಕ: 19/03/2011**

**ವಿಷಯ:** ಪಿ.ಡಿ.ಎಂ.ಎಸ್, ಯಲಹಂಕ ಘಟಕದ ನಿರುಪಯುಕ್ತಗೊಳಿಸಿದ ವಾಹನ ಸಂಖ್ಯೆ:ಕೆಎ01–ಜಿ–1243 ಸ್ವರಾಜ್ ಮಜ್ದಾವನ್ನು ಬಹಿರಂಗ ಹರಾಜು ಪ್ರಕಟಣೆ ಬಗ್ಗೆ.

**ಉಲ್ಲೇಖ:** 1] ಸರ್ಕಾರಿ ಆದೇಶ ಸಂಖ್ಯೆ:ಸಿಅಸುಇ/137/ಶಿವಾನೀ/2010, ದಿನಾಂಕ:11–01–2011.

2] ಸಂಖ್ಯೆ:ವಾ.ಸಾ (1)40/2009–10, ದಿ:21–02–2011.

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖ–2 ರಲ್ಲಿ ನಿರುಪಯುಕ್ತಗೊಳಿಸಿದ ಪೊಲೀಸ್ ವಾಹನ ಚಾಲನಾ ಮತ್ತು ಸಂರಕ್ಷಣಾ ಶಾಲೆಯ ಈ ಕೆಳಕಂಡ ವಾಹನವನ್ನು ಪಿ.ಡಿ.ಎಂ.ಎಸ್ ಕಛೇರಿ ಆವರಣದಲ್ಲಿ ದಿನಾಂಕ:02–05–2011 ರಂದು ಬೆಳಿಗ್ಗೆ 11–00 ಗಂಟೆಗೆ ಬಹಿರಂಗ ಹರಾಜು ಮಾಡಲು ನಿಗದಿಗೊಳಿಸಲಾಗಿದೆ. ಆದ್ದರಿಂದ ಇಚ್ಛೆಯುಳ್ಳವರು ಸದರಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಖರೀದಿಸಬಹುದಾಗಿದೆ.

| ಕ್ರ.ಸಂ. | ವಾಹನದ ನೋಂದಣಿ ಸಂಖ್ಯೆ | ಮಾದರಿ | ತಯಾರಿಕಾ ವರ್ಷ |
|---|---|---|---|
| 1 | ಕೆಎ–01–ಜಿ–1243 | ಸ್ವರಾಜ್ ಮಜ್ದಾ | 1993 |

ಮೇಲ್ಕಂಡ ವಾಹನವನ್ನು ಖರೀದಿಸಲು ಟೆಂಡರ್ ಕಮ್ ಹರಾಜಿನಲ್ಲಿ ಭಾಗವಹಿಸುವ ಬಿಡ್‌ದಾರರು ಈ ಕೆಳಗೆ ಸೂಚಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರಬೇಕಾಗುತ್ತದೆ.

**ಟೆಂಡರ್ ಕಮ್ ಬಹಿರಂಗ ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ಡ್ ಕವರ್) ಪೊಲೀಸ್ ಅಧೀಕ್ಷಕರು, ಪಿ.ಡಿ.ಎಂ.ಎಸ್, ಯಲಹಂಕ, ಬೆಂಗಳೂರು–63 ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ (ನಿರುಪಯುಕ್ತ ಪೊಲೀಸ್ ವಾಹನದ) ಖರೀದಿ ಬಗ್ಗೆ ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.
2. ಪ್ರತಿಯೊಬ್ಬ ಟೆಂಡರ್‌ದಾರರು / ಬಿಡ್‌ದಾರರು ವಾಹನದ ಹರಾಜಿನಲ್ಲಿ ಭಾಗವಹಿಸಲು ಭದ್ರತಾ ಠೇವಣಿ ರೂ.2,000=00 ಗಳನ್ನು ಡಿ.ಡಿ ಅಥವಾ ನಗದು ರೂಪದಲ್ಲಿ ಪೊಲೀಸ್ ಅಧೀಕ್ಷಕರು, ಪಿ.ಡಿ.ಎಂ.ಎಸ್, ಯಲಹಂಕ ಬೆಂಗಳೂರು ಇವರ ಹೆಸರಿನಲ್ಲಿ ಪಾವತಿ ಮಾಡಿ ಅರ್ಜಿಯನ್ನು ಸಲ್ಲಿಸಬೇಕು, ಚೆಕ್ಕುಗಳನ್ನು ಸ್ವೀಕರಿಸುವುದಿಲ್ಲ. ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಠೇವಣಿ ಸಲ್ಲಿಸದೆ ಕಳುಹಿಸಲಾದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್ ಫಾರಂನಲ್ಲಿ ದರವನ್ನು ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ಪೂರ್ಣ ಸಹಿಯೊಂದಿಗೆ ದೃಢೀಕರಿಸಿರಬೇಕು.
4. ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
5. ಟೆಂಡರ್‌ಗಳನ್ನು ದಿನಾಂಕ:30–04–2011 ರಂದು ಸಂಜೆ 5–00 ಗಂಟೆಯ ಒಳಗೆ ಈ ಕಛೇರಿಗೆ ತಲುಪುವಂತೆ ಕಳುಹಿಸಬೇಕು. ತಡವಾಗಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ಟೆಂಡರ್‌ದಾರರು ಸಹ ಹೆಚ್ಚಿನ ಭದ್ರತಾ ಠೇವಣಿ ಹಣವಿಲ್ಲದೆ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.
7. ಪೊಲೀಸ್ ಅಧೀಕ್ಷಕರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜನ್ನು ನಡೆಸುವರು. ಠೇವಣಿ ತುಂಬಿದ ಟೆಂಡರ್ / ಸವಾಲುದಾರರು ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
8. ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆಯನ್ನು ದಾಖಲು ಮಾಡಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಯನ್ನು ಪೊಲೀಸ್ ಅಧೀಕ್ಷಕರವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮಕ್ಷಮದಲ್ಲಿ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಯಾರು ಹೆಚ್ಚಿನ ಬೆಲೆಯನ್ನು ನೀಡಿರುತ್ತಾರೋ ಅವರನ್ನು ಯಶಸ್ವಿ ಖರೀದಿದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿಯಾದ ಟೆಂಡರ್ / ಸವಾಲುದಾರರು ವಾಹನದ ಒಟ್ಟು ಬೆಲೆಯ ಶೇಕಡಾ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ಕಟ್ಟಬೇಕು. ಉಳಿದ ಹಣವನ್ನು ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರು ಅನುಮೋದಿಸಿದ ನಂತರ ಪಾವತಿ ಮಾಡಿ 15 ದಿನಗೊಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ತೆಗೆದುಕೊಂಡು ಹೋಗಬೇಕು. ತಪ್ಪಿದರೆ ಮುಂಗಡವಾಗಿ ಕಟ್ಟಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
10. ಪೂರ್ಣ ಮೊತ್ತವನ್ನು ಪಿ.ಡಿ.ಎಂ.ಎಸ್ ಯಲಹಂಕ ಪೊಲೀಸ್ ಅಧೀಕ್ಷಕರ ಕಛೇರಿಯಲ್ಲಿ ನಗದಾಗಿ ಪಾವತಿ ಮಾಡಬೇಕು. ಚೆಕ್ಕುಗಳನ್ನು ಸ್ವೀಕರಿಸಲಾಗುವುದಿಲ್ಲ.
11. ಹರಾಜಿನಲ್ಲಿ ಭಾಗವಹಿಸಿದ ಟೆಂಡರ್ / ಸವಾಲುದಾರರು ಹರಾಜು ಮುಗಿದ ನಂತರ ಹರಾಜಿನಲ್ಲಿ ಯಶಸ್ವಿಯಾದವರು ಮತ್ತು ಯಶಸ್ವಿಯಾಗದವರು ಸರ್ಕಾರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
12. ಹರಾಜು ಮಾಡಲಾದ ವಾಹನದ ಮೌಲ್ಯಕ್ಕೆ ನಿಯಮಾನುಸಾರ ವಾಹನವನ್ನು ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಚಾಲ್ತಿಯಲ್ಲಿರುವ ದರದ ಪ್ರಕಾರ ತೆರಿಗೆ ಮತ್ತು ಸೆಸ್‌ಗಳನ್ನು ಸಹ ಪಾವತಿ ಮಾಡಬೇಕು.
13. ಟೆಂಡರ್ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಬಿಡ್‌ದಾರರು ತಪ್ಪು ಗ್ರಹಿಕೆಯಿಂದ ವಿವಾದ ಉಂಟಾಗಿ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ, ಅಂತಹ ಟೆಂಡರ್ / ಸವಾಲುದಾರರು ಮುಂಗಡವಾಗಿ ಕಟ್ಟಲಾದ (ಇ.ಎಂ.ಡಿ) ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಅಂತಹವರ ವಿರುದ್ಧ ಕಾನೂನುಬದ್ಧವಾಗಿ ಕ್ರಮ ಕೈಗೊಳ್ಳಲಾಗುವುದು.
14. ಹರಾಜಿನಲ್ಲಿ ಯಾವುದೇ ಟೆಂಡರ್ / ಸವಾಲನ್ನು ಯಾವುದೇ ಕಾರಣಕ್ಕಾಗಿ ರದ್ದುಪಡಿಸುವ / ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಪಿ.ಡಿ.ಎಂ.ಎಸ್, ಯಲಹಂಕ, ಬೆಂಗಳೂರು ಇವರು ಹೊಂದಿರುತ್ತಾರೆ. ಇವರ ತೀರ್ಮಾನವೇ ಅಂತಿಮವಾದುದು.
15. ಮೇಲ್ಕಂಡ ಟೆಂಡರ್ / ಹರಾಜಿನ ಸಂಬಂಧದಲ್ಲಿ ಯಾವುದೇ ವಾದ ವಿವಾದಗಳು ಉದ್ಭವಿಸಿದಲ್ಲಿ, ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
16. ಹರಾಜು ಮಾಡಲಿರುವ ನಿರುಪಯುಕ್ತ ವಾಹನಗಳನ್ನು ಯಲಹಂಕದಲ್ಲಿರುವ ಪೊಲೀಸ್ ವಾಹನ ಚಾಲನಾ ಮತ್ತು ಸಂರಕ್ಷಣಾ ಶಾಲೆಯ ಆವರಣದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಇಚ್ಛೆಯುಳ್ಳವರು ಕಛೇರಿ ವೇಳೆಯಲ್ಲಿ ಅಲ್ಲಿನ ಆರ್.ಪಿ.ಐ ರವರನ್ನು ಸಂಪರ್ಕಿಸಿ, ಪರಿಶೀಲನೆ ಮಾಡಿ ಹರಾಜಿನಲ್ಲಿ ಭಾಗವಹಿಸಿ ವಾಹನವನ್ನು ಕೊಳ್ಳಬಹುದು.

ಟೆಂಡರ್ ಫಾರಂ ನ ನಮೂನೆ

ನಿರುಪಯುಕ್ತ ವಾಹನಗಳಿಗೆ ಟೆಂಡರ್

ಗೆ,

ಪೊಲೀಸ್ ಅಧೀಕ್ಷಕರು,

ಪಿ.ಡಿ.ಎಂ.ಎಸ್, ಯಲಹಂಕ,

ಬೆಂಗಳೂರು–63

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ:__________ ದಿನಾಂಕ:__________ರಲ್ಲಿ ತಿಳಿಸಿದ ಕ್ರಮಸಂಖ್ಯೆ _____ ನೋಂದಣಿ ಸಂಖ್ಯೆಯ ವಾಹನವನ್ನು ರೂ.__________ ಗೆ (ಅಕ್ಷರಗಳಲ್ಲಿ ರೂಪಾಯಿ __________ __________) ಖರೀದಿಸಲು ಒಪ್ಪಿರುತ್ತೇನೆ.

ಸ್ಥಳ :

ದಿನಾಂಕ:

ತಮ್ಮ ವಿಶ್ವಾಸಿ,

ವಿಳಾಸ:

ಪಿ.ಆರ್.146

ಪೊಲೀಸ್ ಅಧೀಕ್ಷಕರು,

ಪಿ.ಡಿ.ಎಂ.ಎಸ್, ಯಲಹಂಕ, ಬೆಂಗಳೂರು.

**KARNATAKA STATE BOARD OF WAKFS**

**(Constituted by the Govt. of Karnataka under the Wakf Act, 1995 (Central Act-43 of 95))**

**Darul Awkaf, #6, Cunningham Road, Bangalore-52**

**CORRIGENDUM**

**No.KTW/INQ/37/MYS/2010-11, Dated:26th February, 2011**

**Sub:** Correction of entries pertaining to Noor Ali Shah Makan, B.N. Street, Mandi Mohalla, Mysore.

The wakf Officer, District Wakf Advisory Committee, Mysore, vide his letter at reference above, has reported that the measuring in Gazette Notification No.MBW/19(2) 1965 Dated:01.04.1965 at Sl.No.24, pertains to Noor Ali Sha Makan, B.N. Street, Mandi Mohalla, Mysore, has wrongly mentioned. There is a discrepancy in the Gazette Notification and has requested to correct the measurement as per the City Survey sketch and Encroachment Certificate. Accordingly Public Notice of even No. dated:19.01.2011, issued by this office calling objections or suggestions if any, for the said proposal within 15 days after publication of this office Public Notice. Whereas the Wakf Officer, DWAC, Mysore, vide their report No.DWAC/4/MYS/02-03/369 Dated:07.02.2011 has reported that there were no objections or suggestions received in this behalf and requested to issue necessary orders in this behalf. Hence this Corrigendum.

| Existing Entries | | | Read the Correct Entries | | |
|---|---|---|---|---|---|
| **Sl. No.of Gazette** | **Name of the Wakf** | **Description of Property** | **Sl. No.of Gazette** | **Name of the Wakf** | **Description of Property** |
| **1** | **2** | **3** | **1** | **2** | **3** |
| 24. | Hazrath Noor Ali Shah Makan, Sunni, Banke Nawab Road, Mysore City. | House No.265. 18x20 | 24. | Hazrath Noor Ali Shah Makan, Sunni, Banki Nawab Street, Mysore City. | Door No.265 (PTS.No.98A, CTS.No.5754), Mandi Mohalla.<br>**Measuring:**<br>East: 38'<br>West: 70'<br>North: 58'<br>South: 68'<br>**BOUNDARIES**<br>East: Private Property.<br>West: B.N. Street.<br>North: Noor Ali Shah Makan Road.<br>South: Private property. |

Chief Executive Officer,

PD-27

Karnataka State Board of Wakfs.

**PROCEEDINGS OF THE ADMINISTRATOR,**

**KARNATAKA STATE BOARD OF WAKFS, BANGALORE**

**Sub:** Appointment of Muthawalli for the management of land belonging to Khazath (Sunni), Afzalpur Town & Taluk, Gulbarga District.

**PREAMBLE:**

The land in different survey numbers of Afzalpur Taluk, measuring about 654-38 Acres, belongs to Khazath (Sunni) Afzalpur Town are Wakf land enlisted as such vide Gazette Notification No.KTW/ /ASR/1974 Dated:20.06.1974 at Sl.No.21 of Afzalpur Taluk, Gulbarga District, as per the Gazette Notification the mode of succession of the office of the Muthwalliship is by way of Hereditory. As per the said Notification, the Muthawalliship was in favour of following four (4) persons.

1) Sri Syed Usman S/o Syed Ismail Khazi.

2) Sri Syed Nizamuddin S/o Syed Khasim

3) Sri Gulam Ahmed S/o Nizamuddin Khazi

4) Sri Khaja Moinuddin S/o Syed Usman.

Thereafter as per order of the Assistant Commissioner and Nizam Atiyat, Gulbarga Sub-Division, Gulbarga, in case No.REV/INA/6/76-77 Dated:06.07.1981, "the succession of late Sri Nizamuddin is hereby sanctioned in the name of Sri Gulam Ahmed with equal Shikmi of Sri Afzal Pasha R/o Afzalpur in respect of Inam land situated in Afzalpur Taluk under the Atiyat Enquiries Act and Rules 1952".

Whereas Sri Gulam Ahmed expired on 27.02.1994 without male issues and Sri Afzal Pasha Khazi has expired on 31.08.1992 leaving behind three (3) sons namely, (1) Liyakhat Khazi (2) Mohinuddin Khazi (3) Ghouse Khazi.

Now Sri Moinuddin Khazi S/o Afzal Khazi through application Dated:24.01.2011 has applied for the appointment of Hereditory Muthawalli to the land belonging to Khazath (Sunni) Afzalpur Taluk and he has furnished No objection executed by his two brothers viz., Liyakhat Khazi and Ghouse Khazi in form an affidavit shown before Notary, wherein they have given No objection for the appointment Sri Mohinuddin Khazi as Muthawalli to the Khazath lands.

Thereafter the matter was referred to the Legal Advisor of the Board for legal opinion in the matter. The legal Advisor has given opinion as "if there are no other rival claimants. If the intention of the petitioner is protection of Wakf property or its interest and if he did not claiming any right/title or interest in the Wakf property, his application may be considered for appointment as Muthawalli".

Thereafter the matter was placed before the Administrator of the Board. The Administrator has accorded approval for the appointment of Muthawalli on 05.02.2011. Hence his Order.

**ORDER NO.KBW/APM/79/GBA/2010-11, Dated:19th February, 2011**

In view of the facts stated in the preamble and under section 63 of the Wakf Act 1995, the Karnataka State Board of Wakfs hereby appoints Sri Moinuddin Khazi S/o late Afzal Pasha Khazi as Hereditory Muthawalli to Khazath (Sunni) Masrthu Khidmath Mash Inam, Afzalpur Town & Taluk, Gulbarga District.

The Muthawalli shall function in accordance with the Wakf Act, 1995 and Karnataka Wakf Rules, 1997 and the direction issued by the Karnataka State Board of Wakfs, Bangalore, from time to time.

By Order of the Administrator,
Addl. Chief Executive Officer,
Karnataka State Board of Wakfs.

PD-41

**KARNATAKA STATE BOARD OF WAKFS**

**(Constituted by the Govt. of Karnataka under the Wakf Act, 1995 (Central Act-43 of 95))**

**Darul Awkaf, #6, Cunningham Road, Bangalore-52**

**ERRATUM**

**No.KBW/REG/191/BJR/2002-03, Dated:21st March, 2010**

**Sub:** Correction of entries in respect of Dargah Hazrath Haji Hasan, situated in CTS. No.1506, Ward No.6, of Bijapur.

**Ref:** 1) This office corrigendum bearing No.KBW/REG/191/BJR/2002-03, Dated:09.12.2004.

2) Letter No.DWAC/REG/191/BJR/02-03, Dated:13.08.2009.

**PREAMBLE:**

The institution viz., Dargah Hazrath Haji Hasan, Bijapur, is notified in the Karnataka Gazette of Bijapur District, at Sl.No.267, vide Notification No.KTW/531/ASA/74 Dated:14.02.1974. The Board has issue Corrigendum under reference (1) The Wakf Officer, DWAC, Bijapur, vide his letter Dated:13.08.2009 has reported that the Sl.No. of the Corrigendum has mentioned is in correct and requested to correct the same as 267 instead of 269. Hence this Erratum

| Existing Entries | | | | Read the Correct Entries | | | |
|---|---|---|---|---|---|---|---|
| Sl. No. | Name of the Institution | Description of Wakf Property | Name of the Muthawalli | Sl. No. | Name of the Institution | Description of Wakf Property | Name of the Muthawalli |
| 1 | 2 | 3 | 4 | 1 | 2 | 3 | 4 |
| 269. | Dargah Hazrath Haji Hasan & Mosque, (Sunni), Bijapur | CTS.No.1506. Open site Area 3780, East: 1505 & 1499 West: 1507 & 1519 North: J.M. Road South: CTS.No.1499 | To The Secretary, Managing Committee, Dargah HazratH Haji Hasan & Old Mosque (Sunni), Bijapur | 267. | Dargah Hazrath Haji Hasan & Mosque, (Sunni), Bijapur | CTS.No.1506. Open site Area 3780, East:1505 & 1499. West:1507 & 1519 North: J.M.Road South: CTS.No.1499 | The Secretary, Managing Committee, Dargah HazratH Haji Hasan & Old Mosque (Sunni), Bijapur |

Chief Executive Officer,

PD-42 Karnataka State Board of Wakfs.

## ಕೃಷಿ ಇಲಾಖೆ

## ಉಪ ಕೃಷಿ ನಿರ್ದೇಶಕರ ಕಾರ್ಯಾಲಯ, ರಾಜ್ಯ ಪೀಡೆನಾಶಕ ಪರೀಕ್ಷಣಾ ಪ್ರಯೋಗಾಲಯ, ಧಾರವಾಡ

**ಸಂಖ್ಯೆ: ಉಕೃನಿ/ರಾಪೀಪಪ್ರ/ಅನುಪಯುಕ್ತ/10–11, ದಿನಾಂಕ:4ನೇ ಮಾರ್ಚ್, 2011**

**ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ವಿಷಯ:** ಉಪ ಕೃಷಿ ನಿರ್ದೇಶಕರು (ಪೀಡೆನಾಶಕ ಪರೀಕ್ಷಣಾ ಪ್ರಯೋಗಾಲಯ) ಧಾರವಾಡ ಇವರ ಕಛೇರಿಯಲ್ಲಿರುವ ಅನುಪಯುಕ್ತ ಸಾಮಗ್ರಿಗಳನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇ ಮಾಡುವ ಬಗ್ಗೆ.

**ಉಲ್ಲೇಖ:** ಕೃಷಿ ನಿರ್ದೇಶಕರು, ಬೆಂಗಳೂರು ಇವರ ಅನುಮತಿ ಆದೇಶ ಸಂಖ್ಯೆ: ಸಾಮಾನ್ಯ/ಜ.ವ/ಅನುಪ/133/2009–10, ದಿನಾಂಕ:15.10.2010.

ಈ ಕಛೇರಿಯಲ್ಲಿರುವ ಕೆಳಕಂಡ ಅನುಪಯುಕ್ತ ವಸ್ತುಗಳನ್ನು ಅವು ಹೇಗಿವೆಯೋ ಹಾಗೆ, ದಿನಾಂಕ:07.06.2011 ಅಪರಾಹ್ನ 3.00 ಗಂಟೆಗೆ ಈ ಕಛೇರಿ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮಾಡಲಾಗುವುದು.

ಆಸಕ್ತರು ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ನಿಗದಿತ ಠೇವಣಿ ಹಣ ಪಾವತಿಸಿ ನಿಯಮಾನುಸಾರ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ವಸ್ತುವಿನ ವಿವರ | ಸಂಖ್ಯೆ ವಿಕ್ರಯದ ಮಾದರಿ | ಸ್ಥಳ |
|---|---|---|---|
| 1. | ಪಿ.ಸಿ. ಬೆಸ್ಡ್–ಸ್ಟೆಬಲ್ ಬೀಮ್ UV-VIS ಸ್ಪೆಕ್ಟ್ರೋಫೊಟೊಮೀಟರ್ ಮಾಡೆಲ್ ಕ್ರ.ಸಂ.<br>180–013<br>180–016<br>80 ಕಾಲಂ ಡಾಟ್ ಮೆಟ್ರಿಕ್ಸ್ ಪ್ರಿಂಟರ್ | ಹರಾಜು<br>2<br>2 | ಉಪಕೃಷಿ ನಿರ್ದೇಶಕರು, ರಾಜ್ಯ ಪೀಡೆನಾಶಕ ಪರೀಕ್ಷಣಾ ಪ್ರಯೋಗಾಲಯ, ಧಾರವಾಡ. |
| 2. | ಮೈಕ್ರೋಪ್ರೊಸೆಸ್ ಕಂಟ್ರೋಲ್ಡ್ ಗ್ಯಾಸ್ ಕ್ರೋಮೋಗ್ರಾಫಿ (ಜಿಸಿ) ಮಾಡೆಲ್ 8510, ಕ್ರ.ಸಂ.1250/0396 | 1 | |
| 3. | ಗ್ಯಾಸ್‌ಕೊಮೆಟೋಗ್ರಾಫಿ ಇಂಟಿಗ್ರೆಟರ್ ಓರ್‍ಯಾಕಲ್ (ಜಿಸಿ 8510 ಉಪಕರಣದೊಂದಿಗೆ ಇದ್ದ ಇಂಟಿಗ್ರೇಟೆಡ್ ಒರಾಕಲ್–2, ಸಿಪಿಯು, ಕಲರ್‌ಮೊನಿಟರ್, ಕೀಬೋರ್ಡ್, ಮೌಸ್, ಗೋದ್ರೆಜ್ ಪ್ರಿಂಟರ್) | 1 | |
| 4. | 5 ಕೆವಿಎ ಮೊಸಫೆಟ್ IGBT ಯುಪಿಎಸ್ ಸಿಸ್ಟಂಗಳನ್ನು<br>PO 50047PO50048<br>ಸೀಲ್ಡ್ ಮೆಂಟೆನೆನ್ಸ್ ಫ್ರಿ ಬ್ಯಾಟರಿಗಳೊಂದಿಗೆ<br>ಸೀಲ್ಡ್ ಫ್ರೀಮೆಂಟೆನೆನ್ಸ್ ಫ್ರಿ ಬ್ಯಾಟರಿಗಳು | 2<br>32<br>16 | |

| ಕ್ರ. ಸಂ. | ವಸ್ತುವಿನ ವಿವರ | ಸಂಖ್ಯೆ ವಿಕ್ರಯದ ಮಾದರಿ | ಸ್ಥಳ |
|---|---|---|---|
| 5. | ಸೈಲೆಂಟ್ ಜನರೇಟರ್ UPS ಸಿಸ್ಟಂ 1000VA 3 ತಾಸಿಗೆ 12V 180 Amps 2Nos 24V | 1 | |
| 6. | ಕ್ವಾರ್ಟ್ಜ್ ಡಬಲ್ ಡಿಸ್ಟಿಲೇಶನ್ ಯುನಿಟ್ 4ಲೀ/ತಾಸಿಗೆ ಸಾಮರ್ಥ್ಯದ್ದು ಸಿಂಗಲ್ ಡಿಸ್ಟಿಲೇಶನ್ ಯುನಿಟ್ | 1 | |
| 7. | ಕ್ವಾರ್ಟ್ಜ್ ಡಬಲ್ ಡಿಸ್ಟಿಲೇಶನ್ ಯುನಿಟ್ 1.5ಲೀ/ತಾಸಿಗೆ ಸಾಮರ್ಥ್ಯದ್ದು | 1 | |
| 8. | ಹೀಟಿಂಗ್ ಮೆಂಟಲ್ 6 ಚಂಬರ್ಡ್ 500 ಮೀ.ಲಿ. ಕೆಪಾಸಿಟಿ | 1 | |
| 9. | ಹೀಟಿಂಗ್ ಮೆಂಟಲ್ ಸಿಂಗಲ್ ಚಂಬರ್ಡ್ 250 ಮಿ.ಲಿ. ಕೆಪಾಸಿಟಿ | 1 | |
| 10. | ಕೆಲ್ವಾನ್ 4 ಕೆನಿನ ಸರ್ವೋ ವೊಲ್ಟೆಜ್ ಸ್ಟೆಬಲೈಜರ್ | 4 | |
| 11. | ಹಾಟ್‌ಪ್ಲೇಟ್ ಕಾಸ್ಟ್ ಐರನ್ ಟೈಪ್ (16x10) ವಿಥ್ ಸ್ಮೂತ್ ಸರ್‌ಫೇಸ್ | 2 | |
| 12. | ವಾಟರ್‌ಬಾಥ್ 1 ಕಿ.ವ್ಯಾ (30x25x12.5cm) | 1 | |
| 13. | ಗೋದ್ರೆಜ್ ರೆಫ್ರಿಜರೇಟರ್ | 2 | |

ಮೇಲ್ಕಂಡ ಸಾಮಗ್ರಿಗಳನ್ನು ಕಛೇರಿಯ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10.00 ರಿಂದ ಸಾಯಂಕಾಲ 5.30 ಗಂಟೆಯವರೆಗೆ ಪರಿಶೀಲಿಸಬಹುದಾಗಿದೆ.

**ಟೆಂಡರ್ ಕಂ ಹರಾಜಿನ ಷರತ್ತುಗಳು**

1) ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಸೀಲ್ ಕವರ್) ಉಪ ಕೃಷಿ ನಿರ್ದೇಶಕರು, ರಾಜ್ಯ ಪೀಡೆನಾಶಕ ಪರೀಕ್ಷಣಾ ಪ್ರಯೋಗಾಲಯ, ಪಿ.ಬಿ. ರೋಡ್, ಧಾರವಾಡ ಇವರ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತ ವಸ್ತುಗಳ ಖರೀದಿ ಬಗ್ಗೆ ಎಂದು ಬಿಡಿ ಅಕ್ಷರಗಳಲ್ಲಿ ನಮೂದಿಸಬೇಕು.

2) ಹರಾಜಿನಲ್ಲಿ ಭಾಗವಹಿಸುವವರು ರೂ.17000/– (ರೂ. ಹದಿನೇಳು ಸಾವಿರ) ಮಾತ್ರ ಮೊತ್ತವನ್ನು EMD ಆಗಿ ಹರಾಜು ಪೂರ್ವದಲ್ಲಿ ನಗದಾಗಿ ಕಛೇರಿಯಲ್ಲಿ ಠೇವಣಿ ಇಡಬೇಕು.

3) ಹರಾಜಿನಲ್ಲಿ ಜಯಶೀಲರಾದವರು ಹರಾಜು ಮೊತ್ತದ ಶೇ.25ರಷ್ಟು ಮೊತ್ತವನ್ನು ತಕ್ಷಣ ಪಾವತಿಸುವುದು ಈ ಮೊತ್ತಕ್ಕೆ ಬಡ್ಡಿ ನೀಡಲಾಗುವುದಿಲ್ಲ. ಉಳಿದ ಮೊತ್ತವನ್ನು ಮೇಲಾಧಿಕಾರಿಗಳಿಂದ ಅನುಮೋದನೆ ಬಂದ ನಂತರ, ಈ ಕಛೇರಿಯಿಂದ ನೀಡಲಾಗುವ ದೃಢಪತ್ರ ತಲುಪಿದ 10 ದಿವಸದೊಳಗೆ ಪಾವತಿ ಮಾಡಬೇಕು. ತೆರಿಗೆಯೊಂದಿಗೆ ಪಾವತಿ ಮಾಡುವುದು. (ತೆರಿಗೆ ಮೊತ್ತವನ್ನು ಮಾರಾಟ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ ವಿಧಿಸುವುದು)

4) ಹರಾಜಿನ ಸಾಮಾನನ್ನು ತಮ್ಮ ಸ್ವಂತ ವ್ಯವಸ್ಥೆಯ ಮೂಲಕ ತೆಗೆದುಕೊಂಡು ಹೋಗತಕ್ಕದ್ದು.

5) ಮೇಲಾಧಿಕಾರಿಗಳು ಅನುಮತಿ ನೀಡದ ಹೊರತು ಹರಾಜಿನ ವಸ್ತುಗಳನ್ನು ಹಸ್ತಾಂತರ ಮಾಡಲಾಗುವುದಿಲ್ಲ.

6) ಹರಾಜಿನಲ್ಲಿ ಹೆಚ್ಚು ಬಿಡ್ ಮಾಡಿರುವವರನ್ನು ಬಿಟ್ಟು ಉಳಿದವರಿಗೆ ಹರಾಜು ಪ್ರಕ್ರಿಯೆ ಮುಗಿದ ನಂತರ ಠೇವಣಿ ಮೊತ್ತ ಹಿಂದಿರುಗಿಸಲಾಗುವುದು.

7) ಹರಾಜು ಪ್ರಕ್ರಿಯೆಯನ್ನು ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ಈ ಕಛೇರಿಯ ಮುಖ್ಯಾಧಿಕಾರಿಗಳು ಹೊಂದಿರುತ್ತಾರೆ.

8) ಉಪ ಕೃಷಿ ನಿರ್ದೇಶಕರು, ರಾಜ್ಯ ಪೀಡೆನಾಶಕ ಪರೀಕ್ಷಣಾ ಪ್ರಯೋಗಾಲಯ, ಧಾರವಾಡ ಇವರು ಜಂಟಿ ಕೃಷಿ ನಿರ್ದೇಶಕರು ಧಾರವಾಡ ಇವರ ಕಛೇರಿಯಿಂದ ನೇಮಿಸಲ್ಪಟ್ಟ ಒಬ್ಬರು ಪತ್ರಾಂಕಿತ ಅಧಿಕಾರಿಯ ಉಸ್ತುವಾರಿಯಲ್ಲಿ, ಬಹಿರಂಗ ಹರಾಜು ಪ್ರಕ್ರಿಯೆ ನಡೆಸುವರು.

ಉಪ ಕೃಷಿ ನಿರ್ದೇಶಕರು,

ಪಿ.ಆರ್.138

ರಾಜ್ಯ ಪೀಡೆನಾಶಕ ಪರೀಕ್ಷಣಾ ಪ್ರಯೋಗಾಲಯ, ಧಾರವಾಡ.

## ಪೊಲೀಸ್ ಅಧೀಕ್ಷಕರವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ

### ಟೆಂಡರ್–ಕಂ–ಬಹಿರಂಗ ಹರಾಜು

**ಸಂಖ್ಯೆ: ಎಸಿಟಿ:ಎ3/ನಿರುಪಯುಕ್ತ/488/2010–11, ದಿನಾಂಕ:21ನೇ ಮಾರ್ಚ್, 2011**

**ವಿಷಯ:** ಅನುಪಯುಕ್ತಗೊಳಿಸಿರುವ 01 ಜೀಪು ಮತ್ತು 04 ಮೋಟರ್ ಸೈಕಲ್ ವಾಹನಗಳನ್ನು ದಿನಾಂಕ:04.05.2011ರಂದು ಟೆಂಡರ್–ಕಂ–ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರ ಸಂಖ್ಯೆ: ಸಿಆಸುಇ/137/ಶಿವಾನೀ/2010 ದಿನಾಂಕ:11.01.2011

2) ಸರ್ಕಾರದ ಪತ್ರ ಸಂಖ್ಯೆ: ಹೆಚ್‌ಡಿ/16/ಇಎಂವಿ/2010, ದಿನಾಂಕ:02.02.2011

3) ಮಾನ್ಯ ಡಿಜಿ ಮತ್ತು ಐಜಿಪಿ ಕರ್ನಾಟಕ ರಾಜ್ಯ ಬೆಂಗಳೂರು ರವರ ಆದೇಶ ಸಂಖ್ಯೆ: ವಾಸಾ(1)/40/2009–10 ದಿನಾಂಕ:21.02.2011.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಉಡುಪಿ ಜಿಲ್ಲೆಯ ಈ ಕೆಳಕಂಡ 01 ಜೀಪು ಮತ್ತು 04 ಮೋಟರ್ ಸೈಕಲ್ ನಿರುಪಯುಕ್ತ ಪೊಲೀಸ್ ವಾಹನಗಳನ್ನು ದಿನಾಂಕ:04.05.2011 ರಂದು ಬೆಳಿಗ್ಗೆ 11–00 ಗಂಟೆಗೆ ಜಿಲ್ಲಾ ಸಶಸ್ತ್ರ ಮೀಸಲು ಪಡೆ (ಪೊಲೀಸ್ ಮೋಟಾರು ವಾಹನ ಇಲಾಖೆ) ಉಡುಪಿಯ ಆವರಣದಲ್ಲಿ ಟೆಂಡರ್–ಕಂ–ಬಹಿರಂಗ ಹರಾಜು ಮಾಡಲಾಗುವುದು. ಆಸಕ್ತಿ ಇರುವ ಬಿಡ್‌ದಾರರು ಸದ್ರಿ ಹರಾಜಿನಲ್ಲಿ ಭಾಗವಹಿಸುವುದರ ಮೂಲಕ ಅಥವಾ ಟೆಂಡರ್‌ಗಳನ್ನು ಸಲ್ಲಿಸುವುದರ ಮೂಲಕ ಈ ವಾಹನಗಳನ್ನು ಪಡೆಯಬಹುದಾಗಿರುತ್ತದೆ.

**ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ವಾಹನದ ವಿವರಗಳು**

| ಕ್ರ. ಸಂ. | ವಾಹನದ ನೋಂದಣಿ ಸಂಖ್ಯೆ | ವಾಹನದ ವಿಧ | ಉತ್ಪಾದಕ ವರ್ಷ | ಇಂಧನ ಬಳಕೆ |
|---|---|---|---|---|
| 1. | ಕೆಎ–19–ಜಿ–114 | ಮಹೇಂದ್ರಾ ಜೀಪ್ | 1994 | ಡೀಸಿಲ್ |
| 2. | ಕೆಎ–19–ಜಿ–65 | ಮೋಟಾರ್ ಸೈಕಲ್ | 1993 | ಪೆಟ್ರೋಲ್ |
| 3. | ಸಿಎಜಿ 8807 | ಮೋಟಾರ್ ಸೈಕಲ್ | 1982 | ಪೆಟ್ರೋಲ್ |
| 4. | ಸಿಎಜಿ 8829 | ಮೋಟಾರ್ ಸೈಕಲ್ | 1983 | ಪೆಟ್ರೋಲ್ |
| 5. | ಸಿಎಜಿ 8804 | ಮೋಟಾರ್ ಸೈಕಲ್ | 1982 | ಪೆಟ್ರೋಲ್ |

ಮೇಲೆ ನಮೂದಿಸಿರುವ ಅನುಪಯುಕ್ತ ವಾಹನಗಳನ್ನು ಈ ಕೆಳಗಿನ ಷರತ್ತು ನಿಬಂಧನೆಗಳೊಂದಿಗೆ ಬಹಿರಂಗ ಹರಾಜು ಮಾಡಲಾಗುವುದು.

1) ಮೊಹರು ಮಾಡಿದ ಟೆಂಡರ್ (ಸೀಲ್ಡ್ ಕವರ್) ಲಕೋಟೆಯನ್ನು ಪೊಲೀಸ್ ಅಧೀಕ್ಷಕರು ಉಡುಪಿ ಜಿಲ್ಲೆ ರವರ ವಿಳಾಸಕ್ಕೆ ಅನುಪಯುಕ್ತ ವಾಹನ ಹಾಗೂ ಅನುಪಯುಕ್ತ ವಸ್ತುಗಳ ಖರೀದಿಗಾಗಿ ಟೆಂಡರ್ ಎಂದು ಬರೆದು ಕಳುಹಿಸಬೇಕು.

2) ಅತೀ ಹೆಚ್ಚಿನ ಬೆಲೆಯನ್ನು ಅಂಕಿ ಮತ್ತು ಅಕ್ಷರದಲ್ಲಿ ಬರೆದಿರಬೇಕು.

3) ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

4) ಬಿಡ್‌ದಾರರು/ ಟೆಂಡರ್‌ದಾರರು ರೂ.5000/– (ರೂ. ಐದು ಸಾವಿರ) ಗಳನ್ನು ಹರಾಜು ಪ್ರಾರಂಭಿಸುವುದಕ್ಕಿಂತ ಮೊದಲು ಪೊಲೀಸ್ ಅಧೀಕ್ಷಕರು ಉಡುಪಿ ಜಿಲ್ಲೆ ಇವರ ಹೆಸರಿನಲ್ಲಿ ಠೇವಣಿಯಾಗಿ ಇಡತಕ್ಕದ್ದು.

5) ಹರಾಜು ಮಾಡುವ ಅಧಿಕಾರಿಯವರು ಯಾವುದೇ ಕಾರಣವಿಲ್ಲದೇ ಬಿಡ್‌ನ್ನು ಮುನ್ಸೂಚನೆಯಿಲ್ಲದೇ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹೊಂದಿರುತ್ತಾರೆ.

6) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ:03.05.2011ರ ಅಪರಾಹ್ನ 17–00 ಗಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ಪರಿಗಣಿಸಲಾಗುವುದಿಲ್ಲ.

ಪೊಲೀಸ್ ಅಧೀಕ್ಷಕರು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.147

**ಉಪ ನಿರ್ದೇಶಕರ ಕಾರ್ಯಾಲಯ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಸೈನಿಕ ವಿಶ್ರಾಂತಿ ಗೃಹ ಕಟ್ಟಡ, ಊರ್ವ ಸ್ಟೋರ್ಸ್, ಅಶೋಕ ನಗರ ಅಂಚೆ, ಮಂಗಳೂರು–575006**

**ವಿಷಯ:** ಉಪ ನಿರ್ದೇಶಕರು ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮಂಗಳೂರು ಇವರ ಕಾರ್ಯಾಲಯದ ಒಂದು ಡೀಜಲ್ ಮಹಿಂದ್ರ & ಮಹಿಂದ್ರ ಜೀಪನ್ನು ಬಹಿರಂಗ ಹರಾಜು ಪ್ರಕಟಣೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ/142/ಶವಾನೀ/2000, ದಿನಾಂಕ:05.01.2001.

2) ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರ ಪತ್ರ ಸಂಖ್ಯೆ ಇಲ್ಲ ದಿನಾಂಕ:03.02.2011.

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖಗಳಿಗೆ ಸಂಬಂಧಿಸಿದಂತೆ ಈ ಕೆಳಗೆ ಕಾಣಿಸಿದ ವಾಹನವು ಸರ್ಕಾರಿ ಸೇವೆಗೆ ಅನುಪಯುಕ್ತವಾಗಿದ್ದು, ಮೇಲ್ಕಾಣಿಸಿದ ಕಛೇರಿಯ ಆವರಣದಲ್ಲಿ ನಿಲ್ಲಿಸಲಾಗಿದೆ. ಅದನ್ನು ಈಗ ಸದ್ಯ ಇದ್ದ ಸ್ಥಿತಿಯಲ್ಲಿ ಹೇಗಿದೆಯೋ ಅದೇ ಸ್ಥಿತಿಯಲ್ಲಿ ದಿನಾಂಕ:18.05.2011 ರಂದು ಪೂರ್ವಾಹ್ನ 11.00 ಗಂಟೆಗೆ ಸಾರ್ವಜನಿಕ ಬಹಿರಂಗ ಹರಾಜು ಮಾಡಲಾಗುವುದು.

| ಕ್ರ.ಸಂ. | ವಾಹನ ನೋಂದಣಿ ಸಂಖ್ಯೆ | ವಾಹನ ಖರೀದಿಸಿದ ವರ್ಷ | ಹರಾಜಿನ ದಿನಾಂಕ | ವಾಹನ ನಿಲ್ಲಿಸಿದ ಸ್ಥಳ ಹಾಗೂ ಹರಾಜು ಮಾಡುವ ಸ್ಥಳ | ಹರಾಜು ಮಾಡುವ ಅಧಿಕಾರಿಯ ಹೆಸರು |
|---|---|---|---|---|---|
| 1. | ಸಿ.ಎ.ಜಿ.522 | 1983 | 18.05.2011 | ಉಪ ನಿರ್ದೇಶಕರ ಕಾರ್ಯಾಲಯ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಸೈನಿಕ ವಿಶ್ರಾಂತಿ ಗೃಹ ಕಟ್ಟಡ, ಊರ್ವ ಸ್ಟೋರ್, ಅಶೋಕ ನಗರ ಅಂಚೆ, ಮಂಗಳೂರು–575006. | ಉಪ ನಿರ್ದೇಶಕರು |

1) ಹರಾಜನ್ನು ಕೆಳಗೆ ಸಹಿ ಮಾಡಿರುವ ಅಥವಾ ಅವರಿಂದ ಅನುಮತಿ ಪಡೆದ ಅಧಿಕಾರಿಗಳ ಸಮಕ್ಷಮದಲ್ಲಿ ನಡೆಸಲಾಗುವುದು.

2) ಹರಾಜಿನಲ್ಲಿ ಭಾಗವಹಿಸುವವರು ಮುಂಗಡವಾಗಿ ರೂ.1,400/– (ಒಂದು ಸಾವಿರದ ನಾಲ್ಕು ನೂರು ರೂಪಾಯಿಗಳು ಮಾತ್ರ) ಇಡಗಂಟು ಹಣವನ್ನು ಈ ಕೆಳಗೆ ಸಹಿ ಮಾಡಿದವರ ಹೆಸರಿನಲ್ಲಿ ಬ್ಯಾಂಕ್ ಡಿ.ಡಿ. ಪಡೆದು ತಮ್ಮ ಹೆಸರನ್ನು ನೊಂದಾಯಿಸಿಕೊಳ್ಳಬೇಕು. ಹಾಗೂ ಅಂಚೆ ಮೂಲಕ ಕೂಡ ಕಳುಹಿಸಬಹುದು.

3) ಕನಿಷ್ಟ ಬಿಡ್ಡು ರೂ.14,000/– ಆಗಿರುತ್ತದೆ ಇದಕ್ಕಿಂತ ಕಡಿಮೆ ಬೇಡಿಕೆಯನ್ನು ತಿರಸ್ಕರಿಸಲಾಗುವುದು.

4) ಹರಾಜು ಸಮಯದಲ್ಲಿ ಬೇಡಿಕೆಯ ಮೊತ್ತವನ್ನು ಒಪ್ಪುವ ಅಥವಾ ತಿರಸ್ಕರಿಸುವ ಮತ್ತು ಯಾವುದೇ ಕಾರಣ ನೀಡದೇ ಹರಾಜನ್ನು ಮುಂದುವರಿಸಲು ಅಥವಾ ರದ್ದುಗೊಳಿಸಲು ಅಧಿಕಾರ ಈ ಕೆಳಗೆ ಸಹಿ ಮಾಡಿದವರಿಗೆ ಇರುತ್ತದೆ.

5) ಹೆಚ್ಚಿನ ಮೊತ್ತ ಬೇಡಿಕೆ ಸಲ್ಲಿಸಿದವರ ಹರಾಜನ್ನು ಒಪ್ಪಿಕೊಳ್ಳಲಾಗುವುದು. ಅವರು ಹರಾಜಿನ 50% ಹಣವನ್ನು ಹರಾಜಿನ ದಿನದಂದು ಸಂದಾಯ ಮಾಡಿದ ರಶೀದಿ ಪಡೆಯತಕ್ಕದ್ದು. ತಪ್ಪಿದಲ್ಲಿ ಇಡಗಂಟನ್ನು ಮುಟ್ಟುಗೋಲು ಹಾಕಲಾಗುವುದು.

6) ಇನ್ನೂ ಬಾಕಿ ಕಟ್ಟಬೇಕಾದ 50% ಹರಾಜಿನ ಮೊತ್ತವನ್ನು ಹರಾಜಿನ ದಿನದಿಂದ 07 ದಿನದೊಳಗೆ ಸಂದಾಯ ಮಾಡಿ ವಾಹನ ಯಾವ ಸ್ಥಿತಿಯಲ್ಲಿದೆಯೋ ಅದೇ ಸ್ಥಿತಿಯಲ್ಲಿ ಪಡೆಯತಕ್ಕದ್ದು.

7) ವಾಹನ ಪಡೆದುಕೊಂಡು ಹೋಗುವಾಗ ಮಾರ್ಗ ಮಧ್ಯ ಏನಾದರೂ ತೊಂದರೆಯಾದರೆ ಅವರೇ ಜವಾಬ್ದಾರರು.

8) ವಾಹನದ ವರ್ಗಾವಣೆ, ವಿಮೆ, ಮತ್ತು ವಾಹನ ತೆರಿಗೆ ಯಾವುದೇ ದಾಖಲಾತಿಗಳಿಗೆ ತಗುಲುವ ವೆಚ್ಚವನ್ನು ಬೇಡಿಕೆದಾರರೇ ಪ್ರಾದೇಶಿಕ ಸಾರಿಗೆ ಕಛೇರಿಯಲ್ಲಿ ಹಣ ಸಂದಾಯ ಮಾಡಿ ವರ್ಗಾಯಿಸತಕ್ಕದ್ದು.

9) ವಾಹನದ ಬಹಿರಂಗ ಹರಾಜಾದ ಮೊತ್ತವನ್ನು ನಿಯಮಾನುಸಾರ ಮಾರಾಟ ತೆರಿಗೆ ಮತ್ತು ಇತರ ತೆರಿಗೆಗಳನ್ನು ವಿಧಿಸಲಾಗುವುದು.

10) ಹರಾಜು ಮಾಡಲು ಉದ್ಧೇಶಿಸಿದ ವಾಹನವನ್ನು ಸೈನಿಕ ವಿಶ್ರಾಂತಿ ಗೃಹ ಕಟ್ಟಡದ ನೆಲ ಮಳಿಗೆಯಲ್ಲಿ ನಿಲ್ಲಿಸಲಾಗಿದೆ. ರಜೆ ದಿನಗಳನ್ನು ಹೊರತುಪಡಿಸಿ ಕಛೇರಿ ವೇಳೆಯಲ್ಲಿ ಪರಿಶೀಲಿಸಬಹುದು.

11) ಬಹಿರಂಗ ಹರಾಜನ್ನು ಕಛೇರಿಯ ಆವರಣದಲ್ಲಿ ದಿನಾಂಕ:18.05.2011 ರಂದು ಪೂರ್ವಾಹ್ನ 11.00 ಗಂಟೆಗೆ ನಡೆಸಲಾಗುವುದು.

12) ಹರಾಜು ಮುಗಿದ ಮೇಲೆ ಯಶಸ್ವಿಯಾದ ಬೇಡಿಕೆದಾರನ ಹೊರತಾಗಿ ಉಳಿದೆಲ್ಲ ಬೇಡಿಕೆದಾರರ ಇಡಗಂಟು ಹಣವನ್ನು ಚೆಕ್ ಮೂಲಕ ವಾಪಸ್ ಮಾಡಲಾಗುವುದು.

13) ಯಾವುದೇ ತರಹದ ವಿವಾದಕ್ಕೆ ಅಧಿಕೃತ ಅಧಿಕಾರಿಗಳ ನಿರ್ಣಯವೇ ಕೊನೆಯದು ಮತ್ತು ಬಂಧನಕಾರಿಯಾಗಿರುತ್ತದೆ.

ಉಪನಿರ್ದೇಶಕರು,
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,
ಮಂಗಳೂರು.

ಪಿ.ಆರ್.112

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

**ವಿಷಯ:** ಜವಾನರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಜವಾನರೆಂದು ನೇಮಕಗೊಂಡು ಕೆಲಸಕ್ಕೆ ಹಾಜರಾಗದೇ ಇರುವ ಬ್ಯಾಕ್‌ಲಾಗ್ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 13 SBC 2001 ದಿನಾಂಕ:21.11.2001ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001.

2) ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಲಾಟ್‌ಮೆಂಟ್ ಆರ್ಡರ್ ನಂಬರ್ ಸಿಬ್ಬಂದಿ–2–235/03–04 ದಿನಾಂಕ:21.09.2010.

3) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ/83/2010–11, ದಿನಾಂಕ:10.01.2011.

4) ಸಿ. ಪುಟ್ಟಸ್ವಾಮಿ, ಹೂಕುಂದ ಗ್ರಾಮ, ಕನಕಪುರ ತಾಲ್ಲೂಕು ಇವರ ಮನವಿ ಪತ್ರ ದಿನಾಂಕ:20.01.2011.

**ಪ್ರಸ್ತಾವನೆ:**

ಉಲ್ಲೇಖ (2)ರ ಅಲಾಟ್‌ಮೆಂಟ್ ಆರ್ಡರ್ ಮೇರೆಗೆ ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶದಲ್ಲಿ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ನಮೂದಿಸಿರುವ ಕಛೇರಿಗೆ ಜವಾನರೆಂದು ನೇಮಕ ಮಾಡಿ ಸದರಿ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಕೆಳಕಂಡ ಅಭ್ಯರ್ಥಿಗೆ RPAD ಮೂಲಕ ಕಳುಹಿಸಿ ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಕೆಳಕಂಡ ಅಭ್ಯರ್ಥಿಗೆ ಸೂಚಿಸಲಾಗಿತ್ತು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ST | ಅಭ್ಯರ್ಥಿಯನ್ನು ಜವಾನರೆಂದು ನೇಮಕ ಮಾಡಿದ ಕಛೇರಿ ಹೆಸರು | ವರ್ಗೀಕರಣ |
|---|---|---|---|---|
| 1. | ಸಿ. ಪುಟ್ಟಸ್ವಾಮಿ ಬಿನ್ ಚೂಡಯ್ಯ, ಹೂಕುಂದ ಗ್ರಾಮ ಮತ್ತು ಅಂಚೆ, ಉಯ್ಯಂಬಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ. | SC | ಉಪ ನೋಂದಣಿ ಕಛೇರಿ, ತರೀಕೆರೆ ಚಿಕ್ಕಮಗಳೂರು ಜಿಲ್ಲೆ. | ಪರಿಶಿಷ್ಟ ಜಾತಿ ಸಾಮಾನ್ಯ ಅರ್ಹತಾ ಅಭ್ಯರ್ಥಿ ಮುಖ್ಯಪಟ್ಟಿ |

ಆದರೆ ಮೇಲ್ಕಂಡ ಅಭ್ಯರ್ಥಿಯು ಸದರಿ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ:18.01.2011 ರಂದು ಸ್ವೀಕರಿಸಿದ್ದರೂ ಸಹ ಮೇಲ್ಕಂಡ ಅಭ್ಯರ್ಥಿಯು ಅವರನ್ನು ನೇಮಕ ಮಾಡಿದ ಮೇಲ್ಕಂಡ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ.

ಅದಕ್ಕೆ ಬದಲಾಗಿ ಮೇಲ್ಕಂಡ ಅಭ್ಯರ್ಥಿಯು ದಿನಾಂಕ:20.01.2011 ರಂದು ಈ ಕಛೇರಿಗೆ ಲಿಖಿತ ಮನವಿಯನ್ನು ಸಲ್ಲಿಸಿ ಸದರಿ ಮನವಿಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಜವಾನರೆಂದು ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಹೊಂದಲು ತಮಗೆ ಇಚ್ಛೆ ಇರುವುದಿಲ್ಲವೆಂದು ಹಾಗೂ ತಾನು ತನ್ನ ಸ್ವಂತ ಊರಿನಲ್ಲಿ ವ್ಯವಸಾಯ ಮಾಡುತ್ತಿರುತ್ತೇನೆಂದು ಹಾಗೂ ತನ್ನನ್ನು ನೇಮಕಾತಿ ಮಾಡಿರುವ ಉಪ ನೋಂದಣಿ ಕಛೇರಿಯು ಅವರ ಊರಿನಿಂದ ತುಂಬಾ ದೂರ ಇರುವುದರಿಂದ ಅಲ್ಲಿಗೆ ಹೋಗಲು ತಮಗೆ ಇಚ್ಛೆ ಇರುವುದಿಲ್ಲವೆಂದು ತಿಳಿಸುತ್ತಾ ತಮ್ಮ ಬದಲಿಗೆ ಬೇರೊಬ್ಬ ಅಭ್ಯರ್ಥಿಯನ್ನು ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನಿಯಮಾನುಸಾರ ಜವಾನರೆಂದು ನೇಮಕ ಮಾಡಿಕೊಳ್ಳಬಹುದೆಂದು ಇದಕ್ಕೆ ತಮ್ಮ ತಂಟೆ ತಕರಾರುಗಳು ಮತ್ತು ಅಭ್ಯಂತರಗಳೇನೂ ಇರುವುದಿಲ್ಲವೆಂದು ಹಾಗೂ ತಮಗೆ ಉಲ್ಲೇಖ (3) ರನ್ವಯ ನೀಡಿರುವ ನೇಮಕಾತಿ ಆದೇಶವನ್ನು ಕೂಡಲೇ ರದ್ದುಪಡಿಸುವಂತೆಯೂ ಉಲ್ಲೇಖ (4)ರನ್ವಯ ದಿನಾಂಕ:20.01.2011ರಂದು ಈ ಕಛೇರಿಗೆ ಲಿಖಿತ ಮನವಿ ಸಲ್ಲಿಸಿರುತ್ತಾರೆ.

ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ಕಾನೂನು ರೀತ್ಯಾ ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ/83/10–11, ದಿನಾಂಕ:03.02.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಸಿ. ಪುಟ್ಟಸ್ವಾಮಿ ಎಂಬ ಬ್ಯಾಕ್‌ಲಾಗ್ ಅಭ್ಯರ್ಥಿಗೆ ನೀಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸದರಿ ಅಭ್ಯರ್ಥಿಯ ಕೋರಿಕೆ ಮೇರೆಗೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ಜವಾನರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ಸದರಿ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ಸದರಿ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ
ಜಿಲ್ಲಾ ನೋಂದಣಾಧಿಕಾರಿಗಳು,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.78

**ಕರ್ನಾಟಕ ಲೋಕಸೇವಾ ಆಯೋಗ**
**"ಉದ್ಯೋಗಸೌಧ", ಬೆಂಗಳೂರು–560 001**
**ಸೇರ್ಪಡೆ ಅಧಿಸೂಚನೆ**
**ಸಂಖ್ಯೆ: ಇ(1)1378/2010–11/ಪಿಎಸ್‌ಸಿ, ದಿನಾಂಕ:17.02.2011**

**ಉಲ್ಲೇಖ:** 1) ಆಯೋಗದ ಅಧಿಸೂಚನೆ ಸಂಖ್ಯೆ: ಇ(1) 1369/2004–05/ಪಿಎಸ್‌ಸಿ, ದಿನಾಂಕ:04.11.2004.
2) ಸರ್ವೋಚ್ಛ ನ್ಯಾಯಾಲಯದ ಆದೇಶ ಸಂಖ್ಯೆ:ರಿಟ್ (ಸಿವಿಲ್) 370/2007, ದಿನಾಂಕ:21.09.2010.

ಉಲ್ಲೇಖ (1)ರ ಪ್ರಕಾರ ಗೆಜೆಟೆಡ್ ಪ್ರೊಬೇಷನರ್ಸ್ 2005ನೇ ಸಾಲಿನ ಪತ್ರಾಂಕಿತ ಸಮೂಹ–'ಎ' ಮತ್ತು 'ಬಿ' ಗುಂಪಿನ ಹುದ್ದೆಗಳ ನೇಮಕಾತಿಗಾಗಿ ಅರ್ಜಿಗಳನ್ನು ಆಹ್ವಾನಿಸಿ, ಅಂತಿಮ ಆಯ್ಕೆಪಟ್ಟಿಯನ್ನು ದಿನಾಂಕ:04.05.2006ರಂದು ಪ್ರಕಟಿಸಲಾಗಿತ್ತು. ಉಲ್ಲೇಖ (2)ರ ಮಾನ್ಯ ಸರ್ವೋಚ್ಛ ನ್ಯಾಯಾಲಯದ ದಿನಾಂಕ:21.09.2010ರ ಆದೇಶದ ಮೇರೆಗೆ ಶ್ರೀ ಮಹೇಶ್ ಕುಮಾರ್ ಎಸ್. ಜಿಗಣಿ ಇವರನ್ನು Assistant Superintendent of Prisons ಹುದ್ದೆಗೆ ಆಯ್ಕೆ ಮಾಡಲಾಗಿದ್ದು, ವಿವರಗಳು ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು | ನೋಂದಣಿ ಸಂಖ್ಯೆ | ಮೀಸಲಾತಿ | ಜನ್ಮ ದಿನಾಂಕ | ಆಯ್ಕೆ ಪಟ್ಟಿಯಲ್ಲಿನ ಜೇಷ್ಠತೆ |
|---|---|---|---|---|---|
| 1. | ಶ್ರೀ ಮಹೇಶ್ ಕುಮಾರ್ ಎಸ್. ಜಿಗಣಿ ಬಿನ್ ಕೆ.ಪಿ. ಸಿದ್ದಪ್ಪ, ಪಾದರಾಜ ಮಠದ ಹತ್ತಿರ, ಜಿಗಣಿ (ಪೋಸ್ಟ್ ಮತ್ತು ವಿಲೇಜ್) ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ–560 105. | 403006 | 2ಎ/ಇತರೆ | 01.06.1972 | ಶ್ರೀ ಮಹೇಶ್ ಕುಮಾರ್ ಎಸ್. ಜಿಗಣಿ ಇವರ ಜೇಷ್ಠತೆಯು ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ:04.05.2006ರಲ್ಲಿ ಪ್ರಕಟಿಸಿರುವ ಅಂತಿಮ ಆಯ್ಕೆ ಪಟ್ಟಿಯಲ್ಲಿ Assistant Superintendent of Prisons ಹುದ್ದೆಗಳ ಆಯ್ಕೆ ಕ್ರಮ ಸಂಖ್ಯೆ 07ರ ಅಭ್ಯರ್ಥಿಯಾದ ಶ್ರೀ ಪಿ.ರಂಗನಾಥ (406386) ಮತ್ತು ಕ್ರಮ ಸಂಖ್ಯೆ 08ರ ಅಭ್ಯರ್ಥಿಯಾದ ಶ್ರೀ ಕೆ. ಸುರೇಶ (113948) ಇವರ ಮಧ್ಯೆ ಬರುತ್ತದೆ. |

ಆಯೋಗದ ಆದೇಶದ ಮೇರೆಗೆ
**ಡಿ.ಎಸ್. ವಿಶ್ವನಾಥ್**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ,
ಉದ್ಯೋಗಸೌಧ, ಬೆಂಗಳೂರು.

ಪಿ.ಆರ್.98

**PROCEEDINGS OF THE ADMINISTRATOR,**

**KARNATAKA STATE BOARD OF WAKFS, BANGALORE**

**Sub:** Management of Tanniru Bavi Mohiyuddin Jumma Masjid, Chokkabettu Mangalore Taluk, Dakshina Kannada District.

**Preamble:**

The Tanniru Bavi Mohiyuddin Jumma Masjid, Chokkabettu Mangalore is Wakf institution and the self styled managing committee was managing the affairs of said Wakf. The Chairman, District Wakfs Advisory Committee, Dakshina Kannada vide his report dated:27.05.2010 has reported that the self styled managing committee was called at District Wakfs Advisory Committee office on 22.02.2010 to resolve the dispute between two groups and directed to hold the General Body Meeting to elect regular managing committee. But the self styled committee has not conducted General Body fixed on 23.05.2010 at 2.00 PM. Again the self styled managing committee was called to District Wakfs Advisory Committee on 27.04.2010, 11.05.2010 and 18.05.2010 to resolve the dispute, but the dispute couldn't be solved.

The General Body Meeting was again called on 21.05.2010 at 1.45 PM, the Vice Chairman and Members of District Wakfs Advisory Committee were deputed as observer for the said General Body. In this meeting quarrelling and manhandling occurred and FIR was came to be filed.

In view of the dispute in the Jamath, the Chairman, District Wakfs Advisory Committee, Dakshina Kannada recommended to take the Wakf under the direct management of the Board and to appoint Sri Haji T.C.M. Shariff Retd. Deputy-Superintendent of Police as Administrator for a period of one (1) year or till a regular managing committee is elected/ constituted.

Accordingly the management of the above institution was assumed under the direct management and control of the Board under Section 65 of the Wakf Act 95 by appointing Sri Haji T.C.M. Shariff Retd. Deputy-Suptd. of Police as its Administrator to look after the day to day affairs of the said Wakf vide order No.KBW/MSC/4/DKD/2009-10 Dated:19.07.2010 for a period of (3) months. The self styled managing committee of the said Wakf has challenged the said order before the Hon'ble High Court of Karnataka, Bangalore in Writ Petition No.W.P. 22398/2010 and order of stay was granted. Finally the Hon'ble High Court dismissed the Writ Petition on 08.11.2010, as infructuous as the order of appointment of Administrator was not in operation since the term of the Administrator was only for a period of three months and the same has been expired and groupism in the Jamath is still continued as such situation is not conducive to constitute the managing committee, it is felf necessary to continue the assumption of the management of above Wakf under the direct management and control of the Karnataka State Board of Wakfs and to appoint the Wakf, Officer, District Wakfs Advisory Committee, Dakshina Kannada District as its Administrator.

Further the Board vide order date:28.01.2011 has appointed the Sri Haji T.C.M. Shariff Retd. Deputy-Suptd. of Police as Administrator to the said Wakf. Shri T.C.M. Shariff has requested to appoint any suitable person due to personal reasons and the private company in which working as Chief Security Officer. The subject was placed before the Administrator Karnataka State Board of Wakfs seeking approval for the change of Administrator. The Administrator accorded approval on 22.02.2011 Hence this order.

**ORDER NO.KBW/MSC/4/DKD/2009-10, DATED:23.02.2011**

In view of the facts mentioned in preamble and in exercise of powers conferred under Section 65 of the Wakf Act, 1995 the institution Tanniru Bavi Mohiyuddin Jumma Masjid, Chokkabettu, Mangalore Taluk, Dakshina Kannada District is hereby taken under the direct management of Karnataka State Board of Wakfs, Bangalore Sri Abdul Majeed, Rtd. SDA, Judicial Dept. Kulshekar Mangalore is appointed as Administrator in place of Sri Haji T.C.M. Shariff Retd Deputy-Superintendent. of Police as Administrator Mangalore (D.K.) to manage the said Wakf for a period of 6 months. With a direction to take over the complete charges of above Wakf from the self styled committee and report compliance. Further he is directed to arrange holding the General Body to constitute the managing committee, in accordance with the approved bye-laws within Six months. The Administrator shall function in accordance with the Wakf Act 1995 and Karnataka Wakf Rules 1997 and the direction issued by Karnataka State Board of Wakfs Bangalore from time to time.

By Order of the Administrator,

PD-40

Chief Executive Officer,

Karnataka State Board of Wakfs.

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಇಪ(1)2972/2010–11/ಪಿಎಸ್‌ಸಿ, ದಿನಾಂಕ:23–03–2011**

**ವಿಷಯ: 2011**ನೇ ಸಾಲಿನ **ಪ್ರಥಮ** ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

ಆಯೋಗದಿಂದ ನಡೆಸಲಾಗುವ **2011ನೇ** ಸಾಲಿನ **ಪ್ರಥಮ** ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಗಳಡಿಯಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ. ಈ ಬಗ್ಗೆ ಸೂಚನೆಗಳನ್ನು ಆಯೋಗದ ವೆಬ್‌ಸೈಟ್ **"http://kpsc.kar.nic.in"**ನಲ್ಲಿ ಬಿತ್ತರಿಸಲಾಗಿದೆ. ಈ ಪರೀಕ್ಷೆಗಳನ್ನು ಜೂನ್–ಜುಲೈ 2011ರ ಮಾಹೆಯಲ್ಲಿ ನಡೆಸಲಾಗುವುದು. ಪರೀಕ್ಷೆಗಳ ವೇಳಾ ಪಟ್ಟಿಯನ್ನು ಈ ಅಧಿಸೂಚನೆಯ ಅನುಬಂಧ "ಎ" ನಲ್ಲಿ ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಯುವ ಪರೀಕ್ಷೆಗಳ ಬಗ್ಗೆ ವಿವರವಾಗಿ ನೀಡಲಾಗಿದೆ. ಎಲ್ಲಾ ಕೇಂದ್ರಗಳಲ್ಲಿ ನಡೆಯುವ ಪರೀಕ್ಷೆಗಳ ಬಗ್ಗೆ ಅನುಬಂಧ "ಬಿ" ನಲ್ಲಿ ವಿವರ ನೀಡಲಾಗಿದೆ. ಪರೀಕ್ಷೆಗೆ ಹಾಜರಾಗಬಯಸುವ ಅಭ್ಯರ್ಥಿಗಳು ಒಂದು ಅರ್ಜಿಯಲ್ಲಿ ಗರಿಷ್ಠ ಆರು ವಿಷಯಗಳನ್ನು ಆಯ್ಕೆಮಾಡಿಕೊಳ್ಳಬಹುದು. ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿಮಾಡುವಾಗ ವಿಷಯ ಮತ್ತು ವಿಷಯ ಸಂಕೇತಗಳನ್ನು ಎಚ್ಚರಿಕೆಯಿಂದ ಭರ್ತಿ ಮಾಡಲು ಸೂಚಿಸಿದೆ.

**ಅಭ್ಯರ್ಥಿಗಳು ಆನ್‌ಲೈನ್ ಮೂಲಕ ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಹಾಕಲು ಅನುಸರಿಸುವ ಹಂತಗಳನ್ನು ಅನುಕ್ರಮವಾಗಿ ಈ ಕೆಳಕಂಡಂತೆ ವಿವರಿಸಲಾಗಿದೆ. ಅದೇ ರೀತಿಯಲ್ಲಿ ಕ್ರಮಗಳನ್ನು ಅನುಸರಿಸಿ ಅರ್ಜಿ ಸಲ್ಲಿಸಲು ಸೂಚಿಸಿದೆ.**

(1) ಆಯೋಗದ ವೆಬ್‌ಸೈಟ್ **http://kpsc.kar.nic.in** ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಮೇಲೆ **Online application for Departmental Examination I session 2011** ಎಂದು ಬರುತ್ತದೆ.

(2) **Instruction for online application for departmental examinations** ಎನ್ನುವ **LINK** ನ್ನು ಕ್ಲಿಕ್ ಮಾಡಬೇಕು. ಅರ್ಜಿಯ ಭಾಗ–1ರ ವಿವರಗಳನ್ನು ಭರ್ತಿ ಮಾಡಬೇಕು. ಅಭ್ಯರ್ಥಿಯ ಇತ್ತೀಚಿನ **35x 45mm** (ಜೆಪಿಜಿ) ಅಳತೆಯ ಭಾವಚಿತ್ರವನ್ನು ಶುದ್ಧವಾದ ಬಿಳಿ ಹಾಳೆಯ ಮೇಲೆ ಅಂಟಿಸಿ ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್‌ಪೆನ್/ಮಾರ್ಕರ್ ಪೆನ್‌ನಲ್ಲಿ ಸಹಿಯನ್ನು ಮಾಡಿ ಇದನ್ನು ಸ್ಕ್ಯಾನ್ ಮಾಡಿ ಅರ್ಜಿ ಭಾಗ–1ಕ್ಕೆ **Upload** ಮಾಡಬೇಕು.

(3) ಪರೀಕ್ಷಾ ಶುಲ್ಕವನ್ನು ಪಾವತಿಸಬೇಕಾದ ಬ್ಯಾಂಕ್ ಚಲನ್‌ನನ್ನು ಮುದ್ರಿಸಲು `Generate Challan' ಎನ್ನುವ **LINK** ನ್ನು ಕ್ಲಿಕ್ ಮಾಡಬೇಕು. ಬ್ಯಾಂಕ್ ಚಲನ್‌ನಿನ ಮೂರು ಭಾಗಗಳು ಕಂಪ್ಯೂಟರ್ ಪರದೆಯ ಮೇಲೆ ಗೋಚರಿಸುತ್ತವೆ, ಇದನ್ನು ಮುದ್ರಿಸಿಕೊಳ್ಳಬೇಕು.

(4) ಕ್ರಮ ಸಂಖ್ಯೆ–**3**ರ ನಂತರ ಅರ್ಜಿಯ ಭಾಗ–2ನ್ನು **Generate** ಮಾಡಿಕೊಳ್ಳಬೇಕು. ಇದಕ್ಕೆ **Generate recommendation letter** ಎನ್ನುವ **LINK** ನ್ನು ಕ್ಲಿಕ್ ಮಾಡಬೇಕು. ಅರ್ಜಿಯ ಭಾಗ–2 ಕಂಪ್ಯೂಟರ್ ಪರದೆಯ ಮೇಲೆ ಗೋಚರವಾಗುತ್ತದೆ. ಇದನ್ನು ಮುದ್ರಿಸಿಕೊಳ್ಳಬೇಕು.

(5) ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ **Journal** ಸಂಖ್ಯೆ ಮತ್ತು ದಿನಾಂಕವನ್ನು ನಮೂದಿಸಲು **Update Fee paid details** ಎನ್ನುವ **LINK** ನ್ನು ಕ್ಲಿಕ್ ಮಾಡಬೇಕು. ಕ್ಲಿಕ್ ಮಾಡಿದ ಕೂಡಲೆ ಲಭ್ಯವಾಗುವ ಜಾಗದಲ್ಲಿ **Journal** ಸಂಖ್ಯೆ ಮತ್ತು ದಿನಾಂಕವನ್ನು ನಮೂದಿಸಬೇಕು.

(6) ಮೇಲಧಿಕಾರಿಗಳಿಂದ ದೃಢೀಕೃತಗೊಂಡ (ಸಹಿ ಮತ್ತು ಮೊಹರಿನೊಡನೆ)ಅರ್ಜಿಯ ಭಾಗ–2ನ್ನು ವೆಬ್‌ಸೈಟ್‌ಗೆ ಅಳವಡಿಸಲು **Upload recommendation letter (Part-2)** ಎನ್ನುವ **LINK** ನ್ನು ಕ್ಲಿಕ್ ಮಾಡಬೇಕು ಕ್ಲಿಕ್ ಮಾಡಿದ ನಂತರ ಬರುವ ಸೂಚನೆಗಳ ಅನುಸಾರ ಅರ್ಜಿಯ ಭಾಗ–2ನ್ನು ಸ್ಕ್ಯಾನ್ ಮೂಲಕ **Upload** ಮಾಡಬೇಕು.

ಮೇಲ್ಕಂಡ ಹಂತಗಳ ಸೂಚನೆಗಳನ್ನು ಅದೇ ಕ್ರಮದಲ್ಲಿ ತಪ್ಪದೆ ಪಾಲಿಸಿದಲ್ಲಿ ಅರ್ಜಿ ಸಲ್ಲಿಸುವ ಪ್ರಕ್ರಿಯೆಯು ಪೂರ್ಣಗೊಳ್ಳುತ್ತದೆ. ನಿಮ್ಮ ಅರ್ಜಿಯ ಸ್ಥಿತಿಯನ್ನು **Check Status**ನ್ನು ಕ್ಲಿಕ್ ಮಾಡುವ ಮೂಲಕ ತಿಳಿಯಬಹುದು. ಈ ಹಂತದಲ್ಲಿ ನಿಮ್ಮ ಅರ್ಜಿಯ ಪ್ರತಿಯನ್ನು ಪಡೆಯಬಹುದು.

2. **ಅರ್ಜಿಗಳ ಸಲ್ಲಿಸುವಿಕೆಯ ಹಂತಗಳನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿದೆ:–**

(1) ಅಭ್ಯರ್ಥಿಗಳು ಅರ್ಜಿಯ ಭಾಗ–1ರಲ್ಲಿ ಮಾಹಿತಿಗಳನ್ನು ಹಾಗೂ ಫೋಟೋ ದಾಖಲಿಸಿ ಅರ್ಜಿಯ ಭಾಗ–2 ಹಾಗೂ ಬ್ಯಾಂಕ್ ಚಲನ್ ಪಡೆಯುವ ಪ್ರಾರಂಭದ ದಿನಾಂಕ: **23–03–2011**

(2) ಮೇಲ್ಕಂಡ ಪ್ರಕ್ರಿಯೆಗೆ ದಿನಾಂಕ: **18–04–2011**ರವರೆಗೆ ಕಾಲಾವಕಾಶ ನೀಡಲಾಗಿದೆ.

(3) ಬ್ಯಾಂಕ್‌ನಲ್ಲಿ ಶುಲ್ಕ ಸಂದಾಯ ಮಾಡಲು ದಿನಾಂಕ: **23–04–2011**ರವರೆಗೆ ಕಾಲಾವಕಾಶ ನೀಡಲಾಗಿದೆ.

(4) ಶುಲ್ಕ ಸಂದಾಯದ ಜರ್ನಲ್ ನಂಬರನ್ನು ವೆಬ್‌ಸೈಟ್‌ಗೆ ದಾಖಲಿಸಲು ದಿನಾಂಕ:**25–04–2011**ರವರೆಗೆ ಕಾಲಾವಕಾಶ ನೀಡಲಾಗಿದೆ.

(5) ಅರ್ಜಿಯ ಭಾಗ–2ನ್ನು ವೆಬ್‌ಸೈಟ್‌ಗೆ ಸ್ಕ್ಯಾನ್ ಮೂಲಕ ಅಳವಡಿಸಲು ದಿನಾಂಕ:**28–04–2011**ರವರೆಗೆ ಕಾಲಾವಕಾಶ ನೀಡಲಾಗಿದೆ.

**ಸೂಚನೆಗಳು:**

(1) ಅನುದಾನಿತ/ಖಾಸಗಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರು ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.

ಸಿದ್ಧಪಡಿಸುವಾಗ ಹಿಂದೆ ಪಡೆದ ವಿನಾಯಿತಿಯನ್ನು ಪರಿಗಣಿಸಲಾಗುವುದಿಲ್ಲ. ಕನ್ನಡಭಾಷಾ ಪರೀಕ್ಷೆ ಪತ್ರಿಕೆ–1 ಮತ್ತು ಪತ್ರಿಕೆ–2 ರಲ್ಲಿ ವಿನಾಯಿತಿ ಪಡೆದಿದ್ದಲ್ಲಿ ಮೌಖಿಕ ಸಂದರ್ಶನಕ್ಕೆ ಹಾಜರಾಗಲು, ಸದರಿ ಅಧಿವೇಶನಕ್ಕೆ ಅರ್ಜಿ ಸಲ್ಲಿಸಿ ವಿನಾಯಿತಿ ಪಡೆದ ಬಗ್ಗೆ ವಿವರಗಳನ್ನು ಆನ್‌ಲೈನ್ ಅರ್ಜಿಯ ಸಂಬಂಧಿಸಿದ ಅಂಕಣದಲ್ಲಿ ಕಡ್ಡಾಯವಾಗಿ ನಮೂದಿಸಬೇಕು. ಹಾಗೂ ನಿಗದಿತ **ಪರೀಕ್ಷಾ ಶುಲ್ಕ ರೂ. 100/–ಗಳನ್ನು** ಪಾವತಿಸಬೇಕು ಇಲ್ಲದಿದ್ದಲ್ಲಿ ವಿನಾಯಿತಿಯನ್ನು ಪರಿಗಣಿಸುವುದಿಲ್ಲ.

**ಸೂಚನೆಗಳು:**

(ಎ) ಕೇಂದ್ರ ಪರಿಹಾರ ಸಮಿತಿಯು ಸರ್ಕಾರದ ಸ್ವಾಮ್ಯಕ್ಕೊಳಪಟ್ಟಿರುವ ಸಂಸ್ಥೆಯಾಗಿರುವ ಕಾರಣ ಅಲ್ಲಿಯ ಸಿಬ್ಬಂದಿಗೆ ಆಯೋಗವು ನಡೆಸುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್, ಅಕೌಂಟ್ಸ್ ಲೋಯರ್, ಜನರಲ್ ಲಾ ಇತ್ಯಾದಿ ಕಡ್ಡಾಯ ಗೊಳಿಸಲಾದ ಸೇವಾ ಪರೀಕ್ಷೆಗಳಿಗೆ ಹಾಜರಾಗಲು ಅರ್ಹರಾಗುತ್ತಾರೆ.

(ಬಿ) ಸ್ಥಳೀಯ ಅಭ್ಯರ್ಥಿಗಳು, ಸ್ಟೈಪೆಂಡರಿ ಪದವೀಧರರು, ದೈನಿಕ ಮುಜರಾಯಿ ಮಾಸಿಕ ವೇತನದ ಮೇಲೆ ಕೆಲಸ ಮಾಡುತ್ತಿರುವ ವ್ಯಕ್ತಿಗಳು, ಕರಾರು ಆಧಾರದಲ್ಲಿ ಹಾಗೂ ಅನುದಾನಿತ ಮತ್ತು ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗಳು ಈ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗುವುದಿಲ್ಲ.

(ಸಿ) ಸೇವಾ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯ ಅರ್ಜಿಯ ಭಾಗ–2ರಲ್ಲಿ ಮೇಲಧಿಕಾರಿಯ ಪ್ರಮಾಣಪತ್ರವನ್ನು ದೃಢೀಕರಿಸುವ ಮೊದಲು ಅಭ್ಯರ್ಥಿಯು ಸೇವೆಸಲ್ಲಿಸುತ್ತಿರುವ ಕಛೇರಿ ಮುಖ್ಯಸ್ಥರು ಅದರ ವಿವರಗಳನ್ನು ಕೂಲಂಕಷವಾಗಿ ಪರಿಶೀಲಿಸಿ ವಾಸ್ತವತೆಯನ್ನು ಖಚಿತಪಡಿಸಿಕೊಂಡು ಸತ್ಯಾಪನೆ ಮಾಡಿ ನಂತರ ದೃಢೀಕರಿಸತಕ್ಕದ್ದು.

(ಡಿ) ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ ಮತ್ತು ಲೋಯರ್ ವಿಷಯಗಳ ಪರೀಕ್ಷೆಯಲ್ಲಿ "ಉದ್ಯೋಗ ಮತ್ತು ತರಬೇತಿ ಮಹಾ ನಿರ್ದೇಶನಾಲಯ ನವದೆಹಲಿ ಇವರು ಪ್ರಕಟಿಸಿರುವ ಎಂಪ್ಲಾಯ್‌ಮೆಂಟ್ ಸರ್ವೀಸ್ ಮ್ಯಾನ್ಯುಯಲ್" ಪುಸ್ತಕವನ್ನು ಉಪಯೋಗಿಸಲು ಅನುಮತಿ ನೀಡಲಾಗಿದೆ.

**7. ಪರೀಕ್ಷಾ ಕೇಂದ್ರಗಳು:** ಪ್ರತಿಯೊಬ್ಬ ಅಭ್ಯರ್ಥಿಯು ಪ್ರಸ್ತುತ ಆತನು ಕೆಲಸ ಮಾಡುತ್ತಿರುವ ಜಿಲ್ಲಾ ಕೇಂದ್ರದಲ್ಲಿಯೇ ಪರೀಕ್ಷೆಗೆ ಕುಳಿತುಕೊಳ್ಳತಕ್ಕದ್ದು. ಆದರೆ, ಯಾವುದೇ ಒಬ್ಬ ಅಭ್ಯರ್ಥಿಯು ಅನಂತರ ಇತರ ಕೇಂದ್ರಕ್ಕೆ ವರ್ಗಾವಣೆಯಾದಲ್ಲಿ ಅಥವಾ ಅವನು ತನ್ನ ಕೇಂದ್ರ ಕಾರ್ಯಸ್ಥಾನದ ಹೊರಗೆ ಗಳಿಕೆ ರಜೆಯ ಮೇಲಿರುವುದು ಮುಂತಾದ ನಿರ್ದಿಷ್ಟ ವಿಶೇಷ ಕಾರಣಗಳಿದ್ದಲ್ಲಿ ಅಂತಹ ಅಭ್ಯರ್ಥಿಗಳು ಈ ಬಗ್ಗೆ ಲಿಖಿತ ರೂಪದಲ್ಲಿ ಆಯೋಗದ ಗಮನಕ್ಕೆ ತರತಕ್ಕದ್ದು, ಹಾಗೂ ಸಂಬಂಧಿಸಿದ ಮಾಹಿತಿ/ದಾಖಲೆಗಳನ್ನು ಒದಗಿಸತಕ್ಕದ್ದು. ಆಯೋಗವು ಅಂತಹ ಅಭ್ಯರ್ಥಿಗಳಿಗೆ ಬೇರೆ ಕೇಂದ್ರಗಳಲ್ಲಿ ಪರೀಕ್ಷೆಗೆ ಹಾಜರಾಗುವುದಕ್ಕೆ ಕ್ರಮತೆಗೆದುಕೊಳ್ಳಲಾಗುವುದು. ಆದಾಗ್ಯೂ ಆಯೋಗದ ನಿರ್ದಿಷ್ಟ ಅನುಮತಿ ಇಲ್ಲದೆ ಅಭ್ಯರ್ಥಿಗಳು ಬೇರೆ ಕೇಂದ್ರದಲ್ಲಿ ಪರೀಕ್ಷೆಗಳನ್ನು ತೆಗೆದುಕೊಳ್ಳುವಂತಿಲ್ಲ. ಆ ರೀತಿ ಮಾಡಿದ ಅಭ್ಯರ್ಥಿಗಳು ಆಯೋಗ ತೆಗೆದುಕೊಳ್ಳುವ ಕ್ರಮಕ್ಕೆ ಹೊಣೆಯಾಗುವರು.

ಎ(1) ಖಜಾನೆ ಅಕೌಂಟ್ಸ್, ಸಬಾರ್ಡಿನೇಟ್ ಅಕೌಂಟ್ಸ್ ಸರ್ವೀಸ್, ಎಲೆಕ್ಟ್ರಿಸಿಟಿ ಮತ್ತು ಅಖಿಲ ಭಾರತಸೇವಾ (ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್) ಅಧಿಕಾರಿಗಳಿಗೆ ಕನ್ನಡ ಭಾಷಾ ಪರೀಕ್ಷೆಗಳನ್ನು **ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.**

(2) ಸಬಾರ್ಡಿನೇಟ್ ಅಕೌಂಟ್ಸ್ ಸೇವಾ(ಎಸ್.ಎ.ಎಸ್) ಪರೀಕ್ಷೆಗಳನ್ನು ತೆಗೆದುಕೊಳ್ಳಬೇಕಾಗುವ ನೌಕರರು ಪ್ರಥಮ ದರ್ಜೆ/ದ್ವಿತೀಯ ದರ್ಜೆ ಸಹಾಯಕರಾಗಿದ್ದಲ್ಲಿ ಅವರು ಸೇವೆಗೆ ನೇಮಕಗೊಂಡ ದಿನಾಂಕದಿಂದ ಪ್ರಥಮ ದರ್ಜೆಸಹಾಯಕರಾಗಿ ಮೂರು ವರ್ಷಗಳಿಗಿಂತ ಕಡಿಮೆ ಇರದ ಅಥವಾ ದ್ವಿತೀಯ ದರ್ಜೆ ಸಹಾಯಕರಾಗಿ ಆರು ವರ್ಷಗಳಿಗಿಂತ ಕಡಿಮೆ ಇರದ ಅವಧಿಯ ಸೇವೆ ಸಲ್ಲಿಸಿದ್ದು ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಕಡ್ಡಾಯವಾಗಿ ತೇರ್ಗಡೆಯಾಗಿದ್ದಲ್ಲಿ ಮಾತ್ರ ಸದರಿ ಪರೀಕ್ಷೆಗೆ ಕುಳಿತುಕೊಳ್ಳಲು ಅರ್ಹರಾಗಿರುತ್ತಾರೆ. ಅಂತಹ ಅಭ್ಯರ್ಥಿಗಳು ಅವರ ಸೇವಾ ಅವಧಿಯನ್ನು ಮತ್ತು ಅಕೌಂಟ್ಸ್ ಹೈಯರ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾದ ಬಗ್ಗೆ ವಿವರಗಳನ್ನು ಆನ್‌ಲೈನ್ ಅರ್ಜಿಯ ಸಂಬಂಧಿಸಿದ ಅಂಕಣದಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

ಬಿ) ಸಚಿವಾಲಯದ ಕೈಪಿಡಿ ಪರೀಕ್ಷೆ, ಭಾಷಾಂತರ ಇಲಾಖೆಯ ಭಾಷಾಂತರ ಪರೀಕ್ಷೆ ಭಾರತದ ಕರಾರು ಅಧಿನಿಯಮ, ವಿಶೇಷ ಕಾನೂನು ಮತ್ತು ಸೇವಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗದ ಕೈಪಿಡಿ, ಕರ್ನಾಟಕ ಲೋಕಸೇವಾ ಆಯೋಗದ ನೇಮಕಾತಿ ನಿಯಮಗಳ ಪರೀಕ್ಷೆಗಳು ಮತ್ತು ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಪರೀಕ್ಷೆಗಳನ್ನು ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.

ಇ) ಉಳಿದಂತೆ ಇತರೆ ಪರೀಕ್ಷೆಗಳು ಈ ಕೆಳಕಂಡ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿದ್ದು, ಜಿಲ್ಲಾ ಸಂಕೇತ ಸಂಖ್ಯೆಗಳನ್ನು ಅವುಗಳ ಎದುರಿಗೆ ನೀಡಿದೆ. ಈ ಸಂಕೇತ ಸಂಖ್ಯೆಗಳನ್ನು ಅರ್ಜಿಯಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು:–

| ಜಿಲ್ಲೆ | ಸಂಕೇತ | ಜಿಲ್ಲೆ | ಸಂಕೇತ |
|---|---|---|---|
| ಬೆಂಗಳೂರು | 01 | ಕಾರವಾರ | 17 |
| ಬೆಳಗಾವಿ | 02 | ಕೋಲಾರ | 18 |
| ಬಳ್ಳಾರಿ | 03 | ಕೊಪ್ಪಳ | 19 |
| ಬೀದರ್ | 04 | ಮಂಡ್ಯ | 20 |
| ಬಿಜಾಪುರ | 05 | ಮಂಗಳೂರು | 21 |
| ಬಾಗಲಕೋಟೆ | 06 | ಮಡಿಕೇರಿ | 22 |

| ಜಿಲ್ಲೆ | ಸಂಕೇತ | ಜಿಲ್ಲೆ | ಸಂಕೇತ |
|---|---|---|---|
| ಚಾಮರಾಜನಗರ | 07 | ಮೈಸೂರು | 23 |
| ಚಿಕ್ಕಬಳ್ಳಾಪುರ | 08 | ರಾಮನಗರ | 24 |
| ಚಿಕ್ಕಮಗಳೂರು | 09 | ರಾಯಚೂರು | 25 |
| ಚಿತ್ರದುರ್ಗ | 10 | ಶಿವಮೊಗ್ಗ | 26 |
| ಧಾರವಾಡ | 11 | ತುಮಕೂರು | 27 |
| ದಾವಣಗೆರೆ | 12 | ಉಡುಪಿ | 28 |
| ಗುಲ್ಬರ್ಗಾ | 13 | ನವದೆಹಲಿ | 29 |
| ಗದಗ | 14 | ಮಸ್ಸೂರಿ | 30 |
| ಹಾಸನ | 15 | ಯಾದಗಿರಿ | 31 |
| ಹಾವೇರಿ | 16 | | |

**8. ಪರೀಕ್ಷಾ ಕೇಂದ್ರದ ಬದಲಾವಣೆ:**

ಪರೀಕ್ಷಾ ಕೇಂದ್ರದ ಬದಲಾವಣೆಗೆ ಸಲ್ಲಿಸುವ ಕೋರಿಕೆಗಳನ್ನು ಪರೀಕ್ಷೆ ಪ್ರಾರಂಭವಾಗುವ ಕನಿಷ್ಠ 15 ದಿನಗಳ ಮೊದಲು ಸಲ್ಲಿಸತಕ್ಕದ್ದು. ಆ ದಿನಾಂಕದ ತರುವಾಯ ಸಲ್ಲಿಸಲ್ಪಡುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಧಿಕೃತ ಕಾರಣಗಳ ಮೇಲೆ ಕೇಂದ್ರ ಬದಲಾವಣೆಗೆ ಅರ್ಜಿ ಸಲ್ಲಿಸುವ ನೌಕರರು ವರ್ಗಾವಣೆಯ ಅಥವಾ ಸ್ಥಳ ನಿಯುಕ್ತಿಯ ಆದೇಶಗಳ ದೃಢೀಕೃತ ನಕಲನ್ನು ಅಥವಾ ಸಂದರ್ಭಾನುಸಾರ ಗಳಿಕೆರಜೆ ಮಂಜೂರು ಮಾಡಲಾದ ಅಧಿಕೃತ ಜ್ಞಾಪನಪತ್ರದ ದೃಢೀಕೃತ ನಕಲಿನೊಂದಿಗೆ ಆ ಬಗ್ಗೆ ಪಡೆದ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. ಸ್ವವಿಳಾಸ ಬರೆದ ಹಾಗೂ ಅವಶ್ಯಕ ಅಂಚೆಚೀಟಿ ಹಚ್ಚಲಾದ ಲಕೋಟೆಯನ್ನು ಪತ್ರ ವ್ಯವಹಾರಕ್ಕಾಗಿ ಲಗತ್ತಿಸತಕ್ಕದ್ದು. (ರಿಜಿಸ್ಟರ್ಡ್ ಅಂಚೆಯಲ್ಲಿ ಕಳುಹಿಸಬೇಕಾದರೆ ಅದಕ್ಕೆ ತಗಲುವ ಸಾಕಷ್ಟು ಅಂಚೆಚೀಟಿ ಹಚ್ಚಿರಬೇಕು). ಆದಾಗ್ಯೂ ಆಯೋಗದಿಂದ ನಿರ್ದಿಷ್ಟ ಅನುಮತಿ ಇಲ್ಲದೆ ಬೇರೆ ಕೇಂದ್ರಗಳಲ್ಲಿ ಪರೀಕ್ಷೆಗಳನ್ನು ತೆಗೆದುಕೊಳ್ಳಬಾರದು.

ಎ) ವಿವರಣಾತ್ಮಕ ಪರೀಕ್ಷೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಸೇವಾ ಪರೀಕ್ಷೆಗಳನ್ನು ಆಂಗ್ಲಭಾಷೆಯಲ್ಲಿ ಅಥವಾ ಕನ್ನಡದಲ್ಲಿ ಉತ್ತರಿಸಲು ಅನುಮತಿಸಲಾಗುವುದು.

ಬಿ) ಅಭ್ಯರ್ಥಿಯು ಉತ್ತರಗಳನ್ನು ಬರೆಯಲು ಆಂಗ್ಲ ಅಥವಾ ಕನ್ನಡದ ಯಾವುದೇ ಒಂದು ಮಾಧ್ಯಮವನ್ನು ಮಾತ್ರ ಆಯ್ಕೆ ಮಾಡಿಕೊಳ್ಳತಕ್ಕದ್ದು. ಅರ್ಧ ಆಂಗ್ಲಭಾಷೆಯಲ್ಲಿ ಮತ್ತು ಅರ್ಧ ಕನ್ನಡದಲ್ಲಿ ಉತ್ತರಿಸಿದಲ್ಲಿ ಅಂತಹ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

ಸಿ) ಓಎಂಆರ್ ಉತ್ತರ ಹಾಳೆಯಲ್ಲಿ ನಿಗದಿತ ಸ್ಥಳದಲ್ಲಿ ಅಭ್ಯರ್ಥಿ ನೋಂದಣಿ ಸಂಖ್ಯೆ ಮತ್ತು ಪ್ರಶ್ನೆ ಪತ್ರಿಕೆಯ ವರ್ಷನ್ ಕೋಡನ್ನು ಸರಿಯಾಗಿ ನಮೂದಿಸಿ ಗುರುತಿಸಬೇಕು. ಇಲ್ಲವಾದಲ್ಲಿ ಅಂತಹ ಓ.ಎಂ.ಆರ್. ಉತ್ತರಪತ್ರಿಕೆಯನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

**9. ವಿನಾಯಿತಿ:**

ಎ) ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದ ಎಲ್.ಎಲ್.ಬಿ., ಅಥವಾ ಬಿ.ಎಲ್ ಪದವಿ ಪಡೆದಂತಹ ಕಾನೂನು ಪದವೀಧರರಿಗೆ ಜನರಲ್ ಲಾ ಭಾಗ–1ರ ಪತ್ರಿಕೆ–(1) ಕ್ಕೂ ಮತ್ತು ಜನರಲ್ ಲಾ ಭಾಗ–2 ಕ್ಕೂ ಹಾಗೂ ಬಿ.ಕಾಂ. ಅಥವಾ ಐ.ಕಾಂ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಸಿಯಲ್ ಅಕೌಂಟೆನ್ಸಿ ವಿಷಯದಲ್ಲಿ ತೇರ್ಗಡೆಯಾದವರಿಗೆ ಕಮರ್ಷಿಯಲ್ ಟ್ಯಾಕ್ಸ್ ಹೈಯರ್ ವಿಷಯದ ಪತ್ರಿಕೆ–3ಕ್ಕೂ, ಕೋ–ಆಪರೇಷನ್ ವಿಷಯದ ಪತ್ರಿಕೆ–2ಕ್ಕೂ ಹಾಗೂ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಷಿಯಲ್ ಅಕೌಂಟೆನ್ಸಿ ಓದಿ ಬಿ.ಕಾಂ., ಬಿ.ಬಿ.ಎಂ. ಅಥವಾ ತತ್ಸಮಾನ ಪದವಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಕೋ–ಆಪರೇಟಿವ್ ಆಡಿಟ್ ಪರೀಕ್ಷೆಯ 2ನೇ ಪತ್ರಿಕೆಗೆ ವಿನಾಯಿತಿ ಇದೆ. ಹಾಗೆಯೇ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಷಿಯಲ್ ಅಕೌಂಟೆನ್ಸಿ ವಿಷಯವನ್ನು ಓದಿರುವ ಬಿ.ಕಾಂ. ಪದವೀಧರರಿಗೆ ಎಸ್.ಎ.ಎಸ್. ಭಾಗ–3ರ ಪತ್ರಿಕೆ–1 ಕ್ಕೂ ಹಾಗೂ ಟ್ರೆಜರಿ ಅಕೌಂಟ್ಸ್ ಭಾಗ–2ರ ಪತ್ರಿಕೆ–1ಕ್ಕೂ ವಿನಾಯಿತಿ ಇರುತ್ತದೆ. ವಿನಾಯಿತಿ ಕೋರುವ ಅಭ್ಯರ್ಥಿಗಳು ಈ ತತ್ಸಂಬಂಧ ವಿಷಯಗಳನ್ನು ಅಭ್ಯಸಿಸಿದ್ದ ಬಗ್ಗೆ ಬಿ.ಕಾಂ., ಎಲ್.ಎಲ್.ಬಿ. ಅಥವಾ ತತ್ಸಮಾನ ಪದವಿಯ ದೃಢೀಕೃತ ಅಂಕಪಟ್ಟಿ ಮತ್ತು ಪದವಿ ಪ್ರಮಾಣ ಪತ್ರಗಳನ್ನು ಆಯೋಗದ ಕಛೇರಿಗೆ ರವಾನಿಸತಕ್ಕದ್ದು. ಸದರಿ ಪ್ರಮಾಣ ಪತ್ರಗಳನ್ನು ರವಾನಿಸುವ ಪತ್ರದಲ್ಲಿ ಅಭ್ಯರ್ಥಿಯು ಆನ್‌ಲೈನ್ ನಲ್ಲಿ ಸಲ್ಲಿಸಿದ ಅರ್ಜಿಯ **ID (Applicaton ID)** ಯನ್ನು ಮತ್ತು ಆಯ್ದುಕೊಂಡ ಪರೀಕ್ಷಾಕೇಂದ್ರವನ್ನು ಉಲ್ಲೇಖಿಸತಕ್ಕದ್ದು. ಆನ್‌ಲೈನ್ ಅರ್ಜಿಗೆ ಸಂಬಂಧಿಸಿದ ಅಂಕಣದಲ್ಲಿ ಅಭ್ಯರ್ಥಿಯು ಪಡೆದಿರುವ ಪದವಿಯ ಬಗ್ಗೆ ಕಡ್ಡಾಯವಾಗಿ ನಮೂದಿಸತಕ್ಕದ್ದು. ತಪ್ಪಿದಲ್ಲಿ ಅಂತಹ ವಿನಾಯಿತಿಗಳನ್ನು ಪರಿಗಣಿಸಲಾಗುವುದಿಲ್ಲ.

(ಬಿ) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 76, ದಿನಾಂಕ 10ನೇ ಜನವರಿ 1987ರ ಅನುಸಾರವಾಗಿ ಸರ್ಕಾರಿ ಆದೇಶ ಸಂಖ್ಯೆ 649 ಇಎನ್ ಟಿ 57, ದಿನಾಂಕ 23ನೇ/25ನೇ ಫೆಬ್ರವರಿ 1959ರ ಅನುಸಾರವಾಗಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯಿಂದ ನಡೆಸಲಾದ ಅರಣ್ಯ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಅರಣ್ಯ ಪರೀಕ್ಷೆಯ ಪತ್ರಿಕೆ–2 ರಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿ ನೀಡಲಾಗಿದೆ.

(ಸಿ) ಯಾವುದೇ ಪರೀಕ್ಷೆಯು ಒಂದಕ್ಕಿಂತ ಹೆಚ್ಚು ಪತ್ರಿಕೆಗಳನ್ನೊಳಗೊಂಡಿದ್ದು ಅಭ್ಯರ್ಥಿಯು ಆ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೂ ಅದೇ ವಿಷಯದ ಯಾವುದಾದರೂ ಪತ್ರಿಕೆಗಳಲ್ಲಿ ಆ ಪತ್ರಿಕೆಗೆ ನಿರ್ದಿಷ್ಟಪಡಿಸಲಾದ ಗರಿಷ್ಠ ಅಂಕಗಳಲ್ಲಿ ಶೇಕಡಾ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದಿದ್ದಲ್ಲಿ ಅಂತಹವರನ್ನು ಆ ಪತ್ರಿಕೆಯಲ್ಲಿ ವಿನಾಯಿತಿ ಹೊಂದಿರುವರೆಂದು ಪರಿಗಣಿಸಲಾಗುವುದು. ಅಂತಹವರು ನಿಯಾಮಾನುಸಾರ ಪರೀಕ್ಷೆಗಳ

ಫಲಿತಾಂಶ ಘೋಷಿಸಿದ ದಿನಾಂಕದಿಂದ ಎರಡು ವರ್ಷಗಳೊಳಗೆ ಆ ಪರೀಕ್ಷೆಯ ಉಳಿದ ಪತ್ರಿಕೆಗಳಲ್ಲಿ ತೇರ್ಗಡೆಯಾಗಲು ಅವಶ್ಯವಿರುವಷ್ಟು ಅಂಕಗಳನ್ನು ಪಡೆದು ತೇರ್ಗಡೆಯಾಗತಕ್ಕದು. ಇಲ್ಲದಿದ್ದಲ್ಲಿ ಅಂತಹ ವಿನಾಯ್ತಿಯು ರದ್ದಾಗುವುದು.

**10. ಪ್ರವೇಶ ಪತ್ರ:**

**ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ಸಲ್ಲಿಸುತ್ತಿರುವುದರಿಂದ ಪ್ರವೇಶಪತ್ರಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.**

ವೇಳಾ ಪಟ್ಟಿಯನ್ನೊಳಗೊಂಡ ಪ್ರವೇಶ ಪತ್ರವನ್ನು ಪರೀಕ್ಷೆಗೆ ಮೊದಲು ಆಯೋಗದ ವೆಬ್‌ಸೈಟ್‌ನಲ್ಲಿ ಅಳವಡಿಸಲಾಗುತ್ತದೆ. ಅಭ್ಯರ್ಥಿಗಳು ಪ್ರವೇಶಪತ್ರಗಳನ್ನು Down load ಮಾಡಿಕೊಂಡು ನಿಗದಿತ ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷಾ ವೇಳೆಯಲ್ಲಿ ಪ್ರವೇಶಪತ್ರವನ್ನು ಹಾಜರುಪಡಿಸತಕ್ಕದ್ದು. ಸದರಿ ಪ್ರವೇಶ ಪತ್ರಗಳನ್ನು ಅಭ್ಯರ್ಥಿಗಳು ಜೋಪಾನವಾಗಿಟ್ಟಿರಬೇಕು ಮತ್ತು ಅವುಗಳನ್ನು ತಮ್ಮ ಸೇವಾ ದಾಖಲೆಗಳಲ್ಲಿ ನಮೂದು ಮಾಡುವುದಕ್ಕಾಗಿ ಆಯೋಗದಿಂದ ನೀಡಲಾದ ತೇರ್ಗಡೆ ಪ್ರಮಾಣ ಪತ್ರದೊಂದಿಗೆ ಸಕ್ಷಮ ಪ್ರಾಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು. ಯಾವುದೇ ಸಂದರ್ಭದಲ್ಲಿ ಪರೀಕ್ಷೆಗಳು ಮುಗಿದ ನಂತರ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದಿಲ್ಲ.

**11. ಪಠ್ಯಪುಸ್ತಕಗಳು:**

ಪಠ್ಯಪುಸ್ತಕಗಳನ್ನು ಉಪಯೋಗಿಸಿ ಪರೀಕ್ಷೆ ಬರೆಯಬಹುದಾದ ಪತ್ರಿಕೆಗಳಿಗೆ ಅಭ್ಯರ್ಥಿಗಳು ಸರ್ಕಾರದಿಂದ ಪ್ರಕಾಶಿಸಲ್ಪಟ್ಟ ಪಠ್ಯಪುಸ್ತಕಗಳನ್ನು ಮತ್ತು ಖಾಸಗಿ ಪ್ರಕಾಶಕರಿಂದ ಪ್ರಕಾಶಿಸಲ್ಪಟ್ಟ ಪುಸ್ತಕಗಳನ್ನು ಸರ್ಕಾರಿ ಪ್ರಕಾಶಿತ ಪುಸ್ತಕಗಳ ಮಾದರಿಗೆ ಯಾವುದೇ ರೀತಿಯ ತದ್ವಿರುದ್ಧವಾಗಿಲ್ಲದಿದ್ದರೆ ಅಂತಹ ಪಠ್ಯಪುಸ್ತಕಗಳನ್ನು ಮಾತ್ರ ಪರೀಕ್ಷಾ ಕೇಂದ್ರಗಳಲ್ಲಿ ಉಪಯೋಗಿಸಬಹುದಾಗಿರುತ್ತದೆ.

**12. ತೇರ್ಗಡೆಗೆ ಗಳಿಸಬೇಕಾದ ಅಂಕಗಳು:**

ಎ) ಯಾವುದೇ ಸೇವಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಒಂದು ಪತ್ರಿಕೆಯ ಪರೀಕ್ಷೆಗೆ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು. ಒಂದಕ್ಕಿಂತ ಹೆಚ್ಚು ಪತ್ರಿಕೆಗಳಿದ್ದಲ್ಲಿ ಪ್ರತಿ ಪತ್ರಿಕೆಯಲ್ಲಿ ಕನಿಷ್ಠ ಶೇಕಡಾ 35 ಮತ್ತು ಒಟ್ಟು ಎಲ್ಲಾ ಪತ್ರಿಕೆಗಳಿಂದ ಕನಿಷ್ಠ ಶೇಕಡಾ 40 ಅಂಕಗಳನ್ನು ಪಡೆದಿರಬೇಕು. ವಿನಾಯಿತಿ ಕೋರಿದ ಬಿ.ಕಾಂ., ಬಿ.ಬಿ.ಎಂ., ಹಾಗೂ ಕಾನೂನು ಪದವೀಧರರು, ಹಾಜರಾಗುವ ವಿಷಯದ ಪ್ರತಿ ಪತ್ರಿಕೆಗಳಲ್ಲಿ ಕನಿಷ್ಠ ಶೇಕಡ 35 ಅಂಕಗಳನ್ನು ಹಾಗೂ ಪ್ರತಿ ವಿಷಯದ ಎಲ್ಲಾ ಪತ್ರಿಕೆಗಳ ಸರಾಸರಿ 40 ಅಂಕಗಳನ್ನು ಗಳಿಸಿರಬೇಕು.

ಬಿ) ಯಾವುದೇ ಪರೀಕ್ಷೆಯಲ್ಲಿ ನಿಗದಿಪಡಿಸಿದ ಗರಿಷ್ಠ ಅಂಕಗಳಲ್ಲಿ ಶೇಕಡ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದು ಉತ್ತೀರ್ಣರಾದಂತಹ ಅಭ್ಯರ್ಥಿಗಳನ್ನು ಪ್ರಥಮ ದರ್ಜೆ ಯಲ್ಲಿ ಉತ್ತೀರ್ಣರಾಗಿರುವುದಾಗಿ ಫಲಿತಾಂಶ ಘೋಷಿಸಲಾಗುವುದು.

**13. ಹಾಜರಿ ಪ್ರಮಾಣ ಪತ್ರಗಳು:**

ಪರೀಕ್ಷೆಗೆ ಹಾಜರಾದ ಬಗ್ಗೆ ಹಾಜರಾತಿ ಪ್ರಮಾಣಪತ್ರ ಪಡೆಯಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಪರೀಕ್ಷಾಕೇಂದ್ರದ ಮೇಲ್ವಿಚಾರಕರಿಂದ ಅದನ್ನು ಪರೀಕ್ಷಾ ದಿನದಂದೇ ಪಡೆಯತಕ್ಕದ್ದು. ಹಾಜರಿ ಪ್ರಮಾಣಪತ್ರವನ್ನು ಆಯೋಗದ ಕಛೇರಿಯಿಂದ ಯಾವುದೇ ಸಂದರ್ಭದಲ್ಲೂ ನೀಡಲಾಗುವುದಿಲ್ಲ.

**14. ಕನ್ನಡಭಾಷಾ ಲಿಖಿತ ಪರೀಕ್ಷೆಗೆ ಮೌಖಿಕ ಪರೀಕ್ಷೆ:**

(1) ಕನ್ನಡ ಭಾಷಾ ವಿಷಯದ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಮೌಖಿಕ ಪರೀಕ್ಷೆಯನ್ನು ಆಯೋಗದ ಕೇಂದ್ರಕಛೇರಿ, ಉದ್ಯೋಗ ಸೌಧ, ಪಾರ್ಕ್‌ಹೌಸ್, ಬೆಂಗಳೂರು–560001 ಇಲ್ಲಿ ಹಾಗೂ ಆಯೋಗದ ಪ್ರಾಂತೀಯ ಕಛೇರಿಗಳಾದ ಬೆಳಗಾಂ, ಗುಲ್ಬರ್ಗಾ, ಮೈಸೂರು ಹಾಗೂ ಶಿವಮೊಗ್ಗ ಕೇಂದ್ರಗಳಲ್ಲಿ ನಡೆಸಲಾಗುವುದು.

**ಸೂಚನೆ:** (1) ಯಾವುದೇ ಸರ್ಕಾರಿ ನೌಕರನು/ನೌಕರಳು ಕನ್ನಡಭಾಷಾ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಹೊರತು ಕನ್ನಡ ಮೌಖಿಕ ಪರೀಕ್ಷೆಗೆ ಅರ್ಹರಾಗುವುದಿಲ್ಲ.

(2) ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 81 ಎಸ್‌ಎಸ್‌ಆರ್ 81, ದಿನಾಂಕ 6ನೇ ಜೂನ್ 1981ರ ಮೇರೆಗೆ ಗೃಹರಕ್ಷಕ ಸಂಸ್ಥೆಯ ಸೈನಿಕರು ಕನ್ನಡ ಭಾಷಾ, ಮೌಖಿಕ ಪರೀಕ್ಷೆಯಲ್ಲಿ ಮಾತ್ರ ತೇರ್ಗಡೆಯಾಗತಕ್ಕದ್ದು. ವೇತನ ಮುಂಬಡ್ತಿ ಪಡೆಯುವ ಮತ್ತು ಸೇವಾ ಸ್ಥಿರೀಕರಣದ ಉದ್ದೇಶಗಳಿಗೆ ಕನ್ನಡ ಭಾಷಾ ಲಿಖಿತ ಪರೀಕ್ಷೆಯ ಬದಲಾಗಿ ಗರಿಷ್ಠ 50 ಅಂಕಗಳನ್ನು ನಿಗದಿಪಡಿಸಿರುವ ಕನ್ನಡ ಮೌಖಿಕ ಪರೀಕ್ಷೆಯಲ್ಲಿ ಮಾತ್ರ ಅವರು ತೇರ್ಗಡೆ ಹೊಂದಬೇಕಾಗಿರುತ್ತದೆ.

(3) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಎಸ್‌ಆರ್ 82, ದಿನಾಂಕ: 30ನೇ ಆಗಸ್ಟ್ 1982ರ ಮೇರೆಗೆ ಅಂಧರಾಗಿರುವ ಮತ್ತು ಕೆಲಸಕ್ಕೆ ಓದುವುದು ಮತ್ತು ಬರೆಯುವುದು ಅವಶ್ಯವಿಲ್ಲದ ಸರ್ಕಾರಿ ನೌಕರರಿಗೆ ಸ್ಥಿರೀಕರಣದ ಮತ್ತು ವಾರ್ಷಿಕ ವೇತನ ಮುಂಬಡ್ತಿಗಳನ್ನು ಪಡೆಯುವ ಉದ್ದೇಶಗಳಿಗಾಗಿ ಕನ್ನಡ ಭಾಷಾ ಲಿಖಿತ ಸೇವಾ ಪರೀಕ್ಷೆಯಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿಸಲಾಗಿದೆ. ಆದರೆ ಅವರು ಕನ್ನಡ ಭಾಷಾ ಮೌಖಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗತಕ್ಕದ್ದು.

**15.** (ಅ) ಆಯೋಗದ ಆದೇಶ ಸಂಖ್ಯೆ ಇ.ಪ(2)3774/94–95/ಪಿಎಸ್‌ಸಿ ದಿನಾಂಕ 18ನೇ,ಫೆಬ್ರವರಿ 1995ರ ಮೇರೆಗೆ ಬ್ಯಾಟರಿ ಚಾಲಿತ ಪ್ರೋಗ್ರಾಮ್ ಮಾಡದೆ ಇರುವಂತಹ ಕ್ಯಾಲುಕ್ಯುಲೇಟರ್‌ಗಳನ್ನು ಎಸ್.ಎ.ಎಸ್ ಪರೀಕ್ಷೆಗಳಲ್ಲಿ ಉಪಯೋಗಿಸಲು ಅಭ್ಯರ್ಥಿಗಳಿಗೆ ಅನುಮತಿ ನೀಡಲಾಗಿದೆ.

(ಆ) ಪರೀಕ್ಷಾ ಕೇಂದ್ರಗಳಿಗೆ ಮೊಬೈಲ್ ಫೋನ್‌ಗಳನ್ನು ತರುವುದು ಮತ್ತು ಉಪಯೋಗಿಸುವುದನ್ನು ಕಡ್ಡಾಯವಾಗಿ ನಿಷೇದಿಸಲಾಗಿದೆ.

**16. ತೇರ್ಗಡೆ ಪ್ರಮಾಣ ಪತ್ರಗಳು:**

ಪ್ರತಿಯೊಂದು ವಿಷಯಕ್ಕೆ ತೇರ್ಗಡೆ ಪ್ರಮಾಣಪತ್ರವನ್ನು ಆಯೋಗದಿಂದ ಫಲಿತಾಂಶವು ಅಧಿಕೃತವಾಗಿ ರಾಜ್ಯಪತ್ರದಲ್ಲಿ ಪ್ರಕಟವಾದ ನಂತರ ಅಂಚೆಯ ಪ್ರಮಾಣಪತ್ರ (Certificate of Posting) ದ ಮೂಲಕ ಕಳುಹಿಸಲಾಗುವುದು. ಪ್ರಮಾಣ ಪತ್ರದಲ್ಲಿ ಮುದ್ರಿತವಾದ ಹೆಸರು ಅಥವಾ ಇನ್ನಾವುದೇ ರೀತಿಯ ತಪ್ಪುಗಳು ಕಂಡುಬಂದಲ್ಲಿ ಅಭ್ಯರ್ಥಿಗಳು ಕೂಡಲೇ ತಿದ್ದುಪಡಿಗಾಗಿ ಸೂಕ್ತ ದಾಖಲೆಗಳೊಂದಿಗೆ ಆಯೋಗದ ಕಛೇರಿಯನ್ನು ಸಂಪರ್ಕಿಸುವುದು.

(ಸೂಚನೆ: ಪರೀಕ್ಷೆಯ ಪ್ರತಿಭಾಗವನ್ನು ಈ ಉದ್ದೇಶಕ್ಕೆ ಒಂದು ಪ್ರತ್ಯೇಕ ಪರೀಕ್ಷೆ ಎಂದು ಪರಿಗಣಿಸಲಾಗುವುದು)

**ಅಂಕಪಟ್ಟಿಗಳು:** ಇಲಾಖಾ ಪರೀಕ್ಷೆಯ ಎಲ್ಲಾ ಅಭ್ಯರ್ಥಿಗಳ ಅಂಕಗಳನ್ನು ಆಯೋಗದ ವೆಬ್ ಸೈಟ್ **http://kpsc.kar.nic.in** ನಲ್ಲಿ ಫಲಿತಾಂಶ ಪ್ರಕಟವಾದ ದಿನಾಂಕದಂದೇ ಪ್ರಕಟಿಸಲಾಗುವುದು ಪ್ರತ್ಯೇಕವಾಗಿ ಅಂಕಪಟ್ಟಿಗಳನ್ನು ನೀಡಲಾಗುವುದಿಲ್ಲ.

**17. ಅಂಕಗಳ ಮರು ಎಣಿಕೆ:**

ಎ) ಯಾವುದೇ ಪರೀಕ್ಷೆಯಲ್ಲಿ ಅನುತ್ತೀರ್ಣನಾದ ಅಭ್ಯರ್ಥಿಯು ಫಲಿತಾಂಶ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸದರಿ ಪರೀಕ್ಷೆಯ ಎಲ್ಲಾ ಪತ್ರಿಕೆಗಳ ಅಥವಾ ಯಾವುದೇ ಪತ್ರಿಕೆಯ ಅಂಕಗಳ ಮರು ಎಣಿಕೆಗಾಗಿ ಆಯೋಗಕ್ಕೆ ಅರ್ಜಿ ಸಲ್ಲಿಸಬಹುದು, ಅಂತಹ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯು **ಪ್ರತಿ ವಿಷಯಕ್ಕೆ ರೂ. 100/–** ಗಳನ್ನು ಕಾರ್ಯದರ್ಶಿ ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದ ಡಿಡಿ/ಐಪಿಓ ಮೂಲಕ ಸಂದಾಯ ಮಾಡತಕ್ಕದ್ದು ಮತ್ತು ಅಂತಹ ಮೊತ್ತವನ್ನು ಸಂದಾಯ ಮಾಡಿದ ಪುರಾವೆಯನ್ನು, ತನ್ನ ಹೆಸರು, ನೋಂದಣಿ ಸಂಖ್ಯೆ ಮತ್ತು ಮರು ಎಣಿಕೆ ಮಾಡಬೇಕಾದ ವಿಷಯದ ವಿವರಗಳನ್ನು ಅರ್ಜಿಯೊಂದಿಗೆ ಒದಗಿಸತಕ್ಕದ್ದು.

ಬಿ) ಅಭ್ಯರ್ಥಿಯು ಪಡೆದ ಅಂಕಗಳ ಮರು ಎಣಿಕೆಯ ಸಂಬಂಧದಲ್ಲಿ ಆಯೋಗದ ನಿರ್ಣಯವೇ ಅಂತಿಮವಾಗಿರುತ್ತದೆ.

**18. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 69 ಎಸ್ಎಸ್ಆರ್ 76, ದಿನಾಂಕ 16ನೇ ಜುಲೈ 1977ರ** ಅನುಸಾರವಾಗಿ ನವದೆಹಲಿಯ ಕರ್ನಾಟಕ ಭವನದಲ್ಲಿ ಕೆಲಸ ಮಾಡುತ್ತಿರುವ ಕರ್ನಾಟಕ ರಾಜ್ಯ ಸರ್ಕಾರಿ ನೌಕರರಿಗೆ ಇಲಾಖಾ ಪರೀಕ್ಷೆಗಳನ್ನು ಆಯೋಗದಿಂದ ಉಪನಿವಾಸ ಆಯುಕ್ತರು, ಕರ್ನಾಟಕ ಭವನದ ನಿವಾಸ ಆಯುಕ್ತರ ಕಛೇರಿ, ನವದೆಹಲಿ ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

**19. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್ಎಸ್ಸಿ 83, ದಿನಾಂಕ 12ನೇ ಅಕ್ಟೋಬರ್ 1983** ಇದರ ಅನುಸಾರವಾಗಿ ಮಸ್ಸೂರಿಯಲ್ಲಿ ತರಬೇತಿ ಪಡೆಯುತ್ತಿರುವ ಕರ್ನಾಟಕ ರಾಜ್ಯದ ಐ.ಎ.ಎಸ್, ಐ.ಪಿ.ಎಸ್, ಮತ್ತು ಐ.ಎಫ್.ಎಸ್ ಪ್ರೊಬೇಷನರುಗಳಿಗೆ ಇಲಾಖಾ ಪರೀಕ್ಷೆ ಗಳನ್ನು ಆಯೋಗವು ಪರೀಕ್ಷೆಗಳ ನಿಯಂತ್ರಣಾಧಿಕಾರಿ, ಲಾಲ್‌ಬಹದ್ದೂರ್ ಶಾಸ್ತ್ರಿ ರಾಷ್ಟ್ರೀಯ ಪ್ರಕಾಶನ ಅಕಾಡೆಮಿ, ಮಸ್ಸೂರಿ, ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

**20. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್ಎಸ್ಸಿ 75, ದಿನಾಂಕ 5ನೇ ಜುಲೈ 1978ರ** ಅನುಸಾರವಾಗಿ ಅಂಧರಾಗಿರುವ ಅಥವಾ ತನ್ನ ಸ್ವಂತ ಕೈಯಿಂದ ಬರೆಯಲು ಅಸಮರ್ಥರಾದ ಅಭ್ಯರ್ಥಿಗಳಿಗೆ ಈ ಮುಂದಿನ ಷರತ್ತುಗಳಿಗೊಳಪಟ್ಟು ಒಬ್ಬ ಅನುಲೇಖಕನ ಸಹಾಯವನ್ನು ಪಡೆಯುವುದಕ್ಕೆ ಅನುಮತಿಸಲಾಗಿದೆ:

1. ಅನುಲೇಖಕನ ಸಹಾಯವನ್ನು ಬಯಸುವ ಅಭ್ಯರ್ಥಿಯು ಅರ್ಜಿಯ ಭಾಗ–2ರೊಂದಿಗೆ ಸರ್ಕಾರಿ ಆಸ್ಪತ್ರೆಯ ವೈದ್ಯರಿಂದ ನೀಡಲಾದ ಒಂದು ಪ್ರಮಾಣ ಪತ್ರದೊಂದಿಗೆ ಅರ್ಜಿಯ ಭಾಗ–2ನ್ನು ಅವನ ಮೇಲಧಿಕಾರಿಯ ಮೂಲಕ ಕಳುಹಿಸತಕ್ಕದ್ದು.
2. ಮೇಲಧಿಕಾರಿಯು ವೈದ್ಯಕೀಯ ಪ್ರಮಾಣಪತ್ರ ಮತ್ತು ಭಾಗ–2ನ್ನು ಆಯೋಗಕ್ಕೆ ಕಳುಹಿಸುವ ಮೊದಲು ಅಭ್ಯರ್ಥಿಯು ನಿಜವಾಗಿ ಅಸಮರ್ಥನಾಗಿರುವನೆ ಮತ್ತು ಅವನಿಗೆ ಅನುಲೇಖಕನ ಸಹಾಯ ಅವಶ್ಯವಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.
3. ಆಯೋಗವು ಅನುಲೇಖಕನ ಸಹಾಯಕ್ಕೆ ಮಂಜೂರಾತಿ ನೀಡಿದಾಗ ಸಂಬಂಧಪಟ್ಟ ಕೇಂದ್ರದ ಮೇಲ್ವಿಚಾರಕರು ಅಭ್ಯರ್ಥಿಗೆ ಒಬ್ಬ ಅನುಲೇಖಕನನ್ನು ನೇಮಕ ಮಾಡತಕ್ಕದ್ದು ಮತ್ತು ಅದನ್ನು ಕಾರ್ಯದರ್ಶಿ ಮತ್ತು ಇಲಾಖಾ ಪರೀಕ್ಷೆಯ ನಿಯಂತ್ರಣಾಧಿಕಾರಿಗೆ ತಿಳಿಸತಕ್ಕದ್ದು.
4. ಹಾಗೆ ನೇಮಕ ಮಾಡಲಾದ ಅನುಲೇಖಕನು ಅಭ್ಯರ್ಥಿಗಿಂತ ಕೆಳಗಿನ ದರ್ಜೆಯವನು ಅಥವಾ ಕಡಿಮೆ ಶಿಕ್ಷಣ ಪಡೆದವನು ಆಗಿರತಕ್ಕದ್ದು ಮತ್ತು ಅವನು ಅಭ್ಯರ್ಥಿಯ ಸಂಬಂಧಿಕನಾಗಿರಬಾರದು.
5. ಅಭ್ಯರ್ಥಿಗಳು ಪರೀಕ್ಷೆಯ ಪ್ರತಿಯೊಂದು ಪತ್ರಿಕೆಗೆ ರೂ. 5/–(ಐದು ರೂಪಾಯಿಗಳು) ಮೊತ್ತವನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು ಮತ್ತು ಸದರಿ ಮೊತ್ತವನ್ನು ಪರೀಕ್ಷೆಯ ಪತ್ರಿಕೆ ಮುಗಿದ ಕೂಡಲೇ ಅನುಲೇಖಕನಿಗೆ ಸಂದಾಯ ಮಾಡತಕ್ಕದ್ದು.
6. ಅನುಲೇಖಕನನ್ನು ನೇಮಕ ಮಾಡಲಾಗಿದ್ದರೆ ಅಭ್ಯರ್ಥಿಗೆ ಹದಿನೈದು ನಿಮಿಷಗಳ ಹೆಚ್ಚಿನ ಕಾಲಾವಕಾಶವನ್ನು ನೀಡಲಾಗುವುದು.
7. ಅನುಲೇಖಕನ ಸಹಾಯ ಬಯಸುವ ಅಭ್ಯರ್ಥಿಗಳು ಅವಶ್ಯಕ ವೈದ್ಯಕೀಯ ಪ್ರಮಾಣ ಪತ್ರ ಮತ್ತು ಮೇಲಧಿಕಾರಿಗಳ ದೃಢೀಕರಣವನ್ನು ತಮ್ಮ ಅರ್ಜಿಯ ಭಾಗ–2ರ ಜೊತೆಯಲ್ಲಿಯೇ ಲಗತ್ತಿಸಿ ಕಳುಹಿಸತಕ್ಕದ್ದು. ಅರ್ಜಿಯ ಭಾಗ–2ರೊಂದಿಗೆ ಸಲ್ಲಿಸದಂತಹ ಕೋರಿಕೆಯನ್ನು ಅನಿವಾರ್ಯ ಹಾಗೂ ಸಕಾರಣವಿಲ್ಲದ ಹೊರತು ಇತರ ಯಾವುದೇ ಸಂದರ್ಭಗಳಲ್ಲೂ ನಿಗದಿಪಡಿಸಲಾದ ಕಡೆಯ ದಿನಾಂಕದ ನಂತರ ಪರಿಗಣಿಸಲಾಗುವುದಿಲ್ಲ.

8. ಅಭ್ಯರ್ಥಿಗಳು ಅನುಲೇಖಕನ ಸಹಾಯ ಕೋರಿ ಸಲ್ಲಿಸುವ ವೈದ್ಯಕೀಯ ಪ್ರಮಾಣ ಪತ್ರವನ್ನು ಅನುಮಾನಾಸ್ಪದ ಸಂದರ್ಭದಲ್ಲಿ ಮಾತ್ರ ವೈದ್ಯಕೀಯ ಮಂಡಳಿಗೆ ಪರಿಶೀಲನೆಗಾಗಿ ಕಳುಹಿಸಲಾಗುವುದು, ಹಾಗೂ ಕೆಲವೊಂದು ಸಂದರ್ಭಗಳಲ್ಲಿ ಅವಶ್ಯಕವೆನಿಸಿದರೆ ಅಂತಹವರನ್ನು ವೈದ್ಯಕೀಯ ಪರಿಶೀಲನೆಗೂ ಗುರಿಪಡಿಸಲಾಗುವುದು. ಸುಳ್ಳು ಪ್ರಮಾಣಪತ್ರ ಹಾಜರುಪಡಿಸಿದ್ದು ಅದು ಸಾಬೀತಾದ ಸಂದರ್ಭಗಳಲ್ಲಿ ಅಂತಹ ಅಭ್ಯರ್ಥಿಗಳ ಮೇಲೆ ನಿಯಮಾನುಸಾರ ಶಿಸ್ತಿನ ಕ್ರಮ ಜರುಗಿಸಲಾಗುವುದಲ್ಲದೆ ಅಂತಹವರ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**21.** ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಪ್ರೊಬೇಷನರ್ಸ್‌ಗಳಿಗೆ/ಅಧಿಕಾರಿಗಳಿಗೆ ಕನ್ನಡಭಾಷಾ ವಿಷಯದ ಇಲಾಖಾ ಪರೀಕ್ಷೆ ಅಭ್ಯರ್ಥಿಗಳಿಗೆ ಸರ್ಕಾರವು ತನ್ನ ಆದೇಶ ಸಂಖ್ಯೆ:ಡಿಪಿಎಆರ್ 168 ಎಸ್‌ಎಂಇ 94, ದಿನಾಂಕ: 12–07–1995ರಲ್ಲಿ ನಿಗದಿಪಡಿಸಲಾಗಿದ್ದ ಕನ್ನಡ ಪತ್ರಿಕೆ–1ರಲ್ಲಿ 10ನೇ ತರಗತಿಯ ಪಠ್ಯಪುಸ್ತಕ **"ಸಾಹಿತ್ಯ ಮಂಜರಿ–3"** ಪುಸ್ತಕದ ಬದಲಾಗಿ 10ನೇ ತರಗತಿಯ ಕನ್ನಡ ದ್ವಿತೀಯ ಹಾಗೂ ತೃತೀಯ ಭಾಷಾಪುಸ್ತಕ **"ತಿಳಿಗನ್ನಡ–6"** ಎಂಬ ಪುಸ್ತಕವನ್ನು ನಿಗದಿ ಪಡಿಸಲಾಗಿದೆ.

**22.** ಮೇಲಿನ ಅಧಿಸೂಚನೆಗೆ ಅನುಗುಣವಾಗಿಲ್ಲದ, ಹಾಗೂ ಆನ್‌ಲೈನ್ ಅರ್ಜಿಯಲ್ಲಿ ನಿಗದಿತ ಸ್ಥಳದಲ್ಲಿ ಅಭ್ಯರ್ಥಿಯ ಸಹಿ ಇಲ್ಲದಂತಹ ನಿಗದಿತ ಶುಲ್ಕ ಪಾವತಿಸದಂತಹ, ಸಂಬಂಧಿತ ಮೇಲಧಿಕಾರಿಗಳಿಂದ ಅಭ್ಯರ್ಥಿಯ ಭಾವಚಿತ್ರಗಳನ್ನು ದೃಢೀಕರಿಸದಂತಹ ಹಾಗೂ ಮೇಲಧಿಕಾರಿಯ ಸಹಿ ಮತ್ತು ಮೊಹರುಗಳನ್ನೊಳಗೊಂಡಿಲ್ಲದಂತಹ ಅರ್ಜಿಗಳನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

**23.** ನಕಲು ಪ್ರಮಾಣಪತ್ರ ಪಡೆಯಬಯಸುವ ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ ಪ್ರಮಾಣಪತ್ರವು ಲಭ್ಯವಿಲ್ಲದ ಬಗ್ಗೆ **ರೂ. 20/–ಗಳ** ಛಾಪಾ ಕಾಗದದ ಮೇಲೆ ನೋಟರಿಯವರ ಮುಂದೆ ಪ್ರಮಾಣಮಾಡಿರುವ **"ಅಫಿಡೆವಿಟ್"** ಹಾಗೂ ಪ್ರವೇಶಪತ್ರ ನೆರಳಚ್ಚು (ಜೆರಾಕ್ಸ್) ಪ್ರತಿಯನ್ನು ಅಥವಾ ನೋಂದಣಿ ಸಂಖ್ಯೆ. ಅಧಿವೇಶನ. ಪರೀಕ್ಷಾಕೇಂದ್ರ, ಇತ್ಯಾದಿ ವಿವರಗಳನ್ನೊಳಗೊಂಡ ಸೇವಾ ಪುಸ್ತಕದ ಭಾಗ–1ರ ಉದ್ಧೃತಭಾಗವನ್ನು ಮೇಲಧಿಕಾರಿಗಳಿಂದ ದೃಢೀಕರಿಸಿ ಲಗತ್ತಿಸಬೇಕು ಹಾಗೂ ಯಾವುದೆ ಅವಧಿಯ ಇಲಾಖಾ ಪರೀಕ್ಷೆಯ ಪ್ರತಿಯೊಂದು ವಿಷಯದ ಪ್ರಮಾಣಪತ್ರಕ್ಕೆ **ರೂ. 100/–** ಗಳ ಶುಲ್ಕವನ್ನು ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದ **ಬ್ಯಾಂಕ್ ಡಿ.ಡಿ/ಐ.ಪಿ.ಓ.**ಅನ್ನು ಸಲ್ಲಿಸತಕ್ಕದ್ದು.

**ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆಗಳು:**

| ಶಾಖೆಗಳು | ದೂರವಾಣಿ ಸಂಖ್ಯೆಗಳು |
|---|---|
| ಮಾಹಿತಿ ಕೇಂದ್ರ | **080–30574957** |
| ಇಲಾಖಾ ಪರೀಕ್ಷಾ ಶಾಖೆ–1 | **080–3057494** |
| ಇಲಾಖಾ ಪರೀಕ್ಷಾ ಶಾಖೆ–2 | **080–30574945** |
| ಪ್ರಾಂತೀಯ ಕಛೇರಿ ಮೈಸೂರು | **0821–2545956** |
| ಪ್ರಾಂತೀಯ ಕಛೇರಿ ಬೆಳಗಾವಿ | **0831–2475345** |
| ಪ್ರಾಂತೀಯ ಕಛೇರಿ ಗುಲ್ಬರ್ಗಾ | **08472–227944** |
| ಪ್ರಾಂತೀಯ ಕಛೇರಿ ಶಿವಮೊಗ್ಗ | **08182–228099** |
| ಸಹಾಯವಾಣಿ | **080–30574913** |

**ಅಭ್ಯರ್ಥಿಗಳಿಗೆ ವಿಶೇಷ ಸೂಚನೆಗಳು:–**

1. ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟ ಎಲ್ಲಾ ಪತ್ರ ವ್ಯವಹಾರವನ್ನು ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001 ಈ ವಿಳಾಸಕ್ಕೆ ಮಾಡತಕ್ಕದ್ದು.
2. ಪರೀಕ್ಷೆಗಳ ಸಂಬಂಧದಲ್ಲಿ ಯಾವುದೇ ಮಾಹಿತಿ ಕೋರುವ ಅಭ್ಯರ್ಥಿಗಳು ಮನವಿಯಲ್ಲಿ ಎಲ್ಲಾ ಮಾಹಿತಿ ನೀಡಿ ಅದರೊಂದಿಗೆ ಸಾಕಷ್ಟು ಅಂಚೆ ಚೀಟಿಗಳನ್ನು ಹಚ್ಚಿದ ಸ್ವವಿಳಾಸ ಬರೆದ ಒಂದು ಲಕೋಟೆಯನ್ನು ಲಗತ್ತಿಸಿದರೆ ಆಯೋಗದ ಉತ್ತರವು ಅಡಚಣೆ ಆಗದೇ ಬೇಗ ತಲುಪುವುದು.
3. ಮಾಹಿತಿಗಾಗಿ ಅಭ್ಯರ್ಥಿಗಳು ಆಯೋಗಕ್ಕೆ ಸಲ್ಲಿಸುವ ಮನವಿಗಳಲ್ಲಿ ನೋಂದಣಿ ಸಂಖ್ಯೆ, ಅಧಿವೇಶನ, ವಿಷಯ ಮತ್ತು ಪರೀಕ್ಷಾಕೇಂದ್ರ ಮುಂತಾದ ಸ್ಪಷ್ಟ ವಿವರಗಳನ್ನು ಸೂಚಿಸದಿದ್ದಲ್ಲಿ ಅಂತಹವುಗಳನ್ನು ಪುರಸ್ಕರಿಸಲಾಗುವುದಿಲ್ಲ.
4. ಅಭ್ಯರ್ಥಿಗಳು ಪೊಲೀಸ್ ಸಮವಸ್ತ್ರವನ್ನು ಧರಿಸಿ ಪರೀಕ್ಷೆ ಬರೆಯುವುದನ್ನು ನಿಷೇಧಿಸಲಾಗಿದೆ.
5. ಅಭ್ಯರ್ಥಿಗಳು ತಮ್ಮ ಸಹ ನೌಕರರನ್ನು/ಇತರರನ್ನು ಕರೆತರುವುದನ್ನು ಮತ್ತು ಪರೀಕ್ಷೆ ನಡೆಯುತ್ತಿರುವಾಗ ಅವರನ್ನು ಭೇಟಿ ಮಾಡಲು ಕೋರುವುದನ್ನು ನಿಷೇಧಿಸಲಾಗಿದೆ.
6. ಅಭ್ಯರ್ಥಿಗಳು ಪರೀಕ್ಷಾ ಕೊಠಡಿಯೊಳಗೆ ಮೊಬೈಲ್ ಫೋನ್ ತರುವುದನ್ನು ನಿಷೇಧಿಸಲಾಗಿದೆ.
7. ಅಭ್ಯರ್ಥಿಗಳು ತಮಗೆ ಕಾಯ್ದಿರಿಸಿದ ಸ್ಥಳದಲ್ಲಿ ಮಾತ್ರ ಕುಳಿತು ಪರೀಕ್ಷೆ ಬರೆಯತಕ್ಕದ್ದು. ತಪ್ಪಿದಲ್ಲಿ ಅವರ ಅಭ್ಯರ್ಥಿತ್ವವನ್ನು ರದ್ದುಗೊಳಿಸಲಾಗುವುದು.

8. **ಅಭ್ಯರ್ಥಿಯು ತನ್ನ ಹುದ್ದೆಗೆ ಸಂಬಂಧಿಸಿದಂತೆ 1974ರ ಕ.ಸ.ಸೇ (ಸೇವಾ ಮತ್ತು ಕನ್ನಡಭಾಷಾ) ನಿಯಮಾವಳಿ ರೀತ್ಯಾ ಕಡ್ಡಾಯಗೊಳಿಸಿದ ವಿಷಯಗಳಿಗೆ ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.**
9. **ಯಾವುದೇ ಹುದ್ದೆಗೆ ಕಡ್ಡಾಯಗೊಳಿಸಿದ ವಿಷಯಗಳ ಪೈಕಿ ಈ ಅಧಿಸೂಚನೆಯೊಂದಿಗೆ ಪ್ರಕಟಿಸಿದ ವೇಳಾಪಟ್ಟಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯಗಳು ಒಂದೇ ದಿನ, ಒಂದೇ ಸಮಯದಲ್ಲಿ ನಡೆಯುವಂತಿದ್ದರೆ, ಅವುಗಳಲ್ಲಿ ಒಂದಕ್ಕೆ ಮಾತ್ರ ಅರ್ಜಿ ಸಲ್ಲಿಸಿ ಪರೀಕ್ಷೆಗೆ ಹಾಜರಾಗತಕ್ಕದ್ದು.**
10. ಪಠ್ಯ ಕ್ರಮಕ್ಕಾಗಿ ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವೆಗಳು (ಸೇವಾ ಮತ್ತು ಕನ್ನಡಭಾಷಾ ಪರೀಕ್ಷೆಗಳು) ನಿಯಮಗಳು 1974 ಮತ್ತು ಅದಕ್ಕೆ ಸರ್ಕಾರದಿಂದ ಕಾಲಕಾಲಕ್ಕೆ ಹೊರಡಿಸಲಾಗಿರುವ ತಿದ್ದುಪಡಿಗಳನ್ನು ನೋಡಬಹುದು.

**24. ದುರ್ವರ್ತನೆ:**

ಯಾವುದೇ ಒಬ್ಬ ಅಭ್ಯರ್ಥಿಯು ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟಂತೆ ಕೃತ್ರಿಮ ದಸ್ತಾವೇಜನ್ನು ಅಥವಾ ಅಕ್ರಮವಾಗಿ ತಿದ್ದಿದ ದಸ್ತಾವೇಜುಗಳನ್ನು ಸಲ್ಲಿಸಿದ ಅಥವಾ ಸರಿಯಲ್ಲದ ಅಥವಾ ಸುಳ್ಳು ವಿವರಣೆಯನ್ನು ನೀಡಿದ ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿದ ಅಥವಾ ಪರೀಕ್ಷೆಯಲ್ಲಿ ಅಕ್ರಮ ವಿಧಾನವನ್ನು ಅನುಸರಿಸಲು ಪ್ರಯತ್ನಿಸಿದ ಅಥವಾ ಬೇರೆ ರೀತಿಯಲ್ಲಿ ಇತರೆ ಯಾವುದೇ ಅಕ್ರಮ ಅನುಚಿತ ಮಾರ್ಗವನ್ನನುಸರಿಸಿದ ಅಪರಾಧವನ್ನು ಮಾಡಿರುವುದಾಗಿ ಆಯೋಗಕ್ಕೆ ಕಂಡುಬಂದಲ್ಲಿ, ಅಂತಹ ಅಭ್ಯರ್ಥಿಯನ್ನು ಕ್ರಿಮಿನಲ್ ವ್ಯವಹರಣೆಗೆ ಗುರಿಪಡಿಸುವುದಲ್ಲದೆ (ಎ) ಅಭ್ಯರ್ಥಿಯ ಆಯ್ಕೆಗಾಗಿ ಆಯೋಗದಿಂದ ನಡೆಸಲಾಗುವ ಯಾವುದೇ ಪರೀಕ್ಷೆಗೆ ಪ್ರವೇಶ ನೀಡುವುದಕ್ಕೆ ಅಥವಾ ಯಾವುದೇ ಸಂದರ್ಶನಕ್ಕೆ ಹಾಜರಾಗುವುದಕ್ಕೆ ಖಾಯಂ ಆಗಿ ಅಥವಾ ಒಂದು ನಿರ್ಧಿಷ್ಟ ಅವಧಿಗೆ ಅನರ್ಹಗೊಳಿಸಲಾಗುವುದು ಮತ್ತು (ಬಿ) ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು.

ಅಭ್ಯರ್ಥಿಗಳು ಪರೀಕ್ಷಾ ಕೇಂದ್ರದಲ್ಲಿ ಸಂವೀಕ್ಷಕರು/ಮೇಲ್ವಿಚಾರಕರು ನೀಡುವ ಸೂಚನೆಗಳನ್ನು ತಪ್ಪದೇ ಪಾಲಿಸುವುದು ತಪ್ಪಿದಲ್ಲಿ ಅದನ್ನು ದುರ್ವರ್ತನೆಯನ್ನಾಗಿ ಪರಿಗಣಿಸಲಾಗುವುದು ಮತ್ತು ಈ ಬಗ್ಗೆ ಶಿಸ್ತಿನ ಕಾರ್ಯವಿಧಾನಗಳಿಗೆ ಒಳಪಡಿಸಲಾಗುವುದು.

**ಡಿ.ಎಸ್. ವಿಶ್ವನಾಥ**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

**ಕರ್ನಾಟಕ ಲೋಕಸೇವಾ ಆಯೋಗ,"ಉದ್ಯೋಗ ಸೌಧ", ಬೆಂಗಳೂರು-560001.**

**ಅಧಿಸೂಚನೆ ಸಂಖ್ಯೆ ಇ.ಪ.(1)2972/2010-11/ಪಿಎಸ್‌ಸಿ, ದಿನಾಂಕ: 23-03-2011**

**ಅನುಬಂಧ-"ಎ"**

**2011ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳು**

**ಬೆಂಗಳೂರು, ಕೇಂದ್ರದಲ್ಲಿ ಮಾತ್ರ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ.**

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| **1** | **2** | **3** | **4** | **5** |
| 1. | ಶನಿವಾರ | **25-06-2011** | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 1.00 ಗಂಟೆ | ಎಸ್.ಎ.ಎಸ್.ಭಾಗ- **I**, ಪತ್ರಿಕೆ-**1** ಮತ್ತು ಎಲೆಕ್ಟ್ರಿಸಿಟಿ ಆಡಿಟ್ ಅಂಡ್ ಅಕೌಂಟ್ಸ್‌ಲಾಸ್ (ಹೈಯರ್) ಭಾಗ- **II** (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ- **I** ಪತ್ರಿಕೆ-**1** (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಕನ್ನಡ ಪತ್ರಿಕೆ-**1**(ಐಎಎಸ್,ಐಪಿಎಸ್ ಮತ್ತು ಐಎಫ್‌ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |
| | | | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 12.00 ಗಂಟೆ | ಸ್ಪೆಷಲ್ ಲಾಸ್ ಅಂಡ್ ಸರ್ವೀಸ್ ರೂಲ್ಸ್ ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯುನಲ್ |
| | | | ಮೇಲಿನಂತೆ | ಎಕ್ಸಾಮಿನೇಷನ್ |
| | | | | ಎಸ್.ಎ.ಎಸ್.ಭಾಗ- **I** ಪತ್ರಿಕೆ-**2** (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | |

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1 | 2 | 3 | 4 | 5 |
| | | | ಮೇಲಿನಂತೆ<br><br>ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ<br>ಮೇಲಿನಂತೆ<br>ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– I ಪತ್ರಿಕೆ–2 (ಪುಸ್ತಕಗಳಿಲ್ಲದೆ)<br>ಸೆಕ್ರೆಟೇರಿಯಟ್ ಮ್ಯಾನುಯಲ್ ಭಾಗ– II<br>ಟ್ರಾನ್ಸ್‌ಲೇಶನ್ ಟೆಸ್ಟ್ (ಪುಸ್ತಕಗಳಿಲ್ಲದೆ)<br>ಕನ್ನಡ ಪತ್ರಿಕೆ–2 (ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |
| 2. | ಭಾನುವಾರ | **26–06–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮೇಲಿನಂತೆ<br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br><br>ಮೇಲಿನಂತೆ | ಎಸ್.ಎ.ಎಸ್. ಭಾಗ– I ಪತ್ರಿಕೆ–3<br>ಟ್ರೆಜರಿ ಅಕೌಂಟ್ಸ್ ಭಾಗ– I ಪತ್ರಿಕೆ–3<br>ಎಸ್.ಎ.ಎಸ್. ಭಾಗ– II ಪತ್ರಿಕೆ–1 (ಪುಸ್ತಕಗಳಿಲ್ಲದೆ)<br>ಟ್ರೆಜರಿ ಅಕೌಂಟ್ಸ್ ಭಾಗ– II ಪತ್ರಿಕೆ–1 (ಎಲಿಮೆಂಟರಿ ಬುಕ್ ಕೀಪಿಂಗ್) |
| 3 | ಸೋಮವಾರ | **27–06–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮೇಲಿನಂತೆ<br>ಮೇಲಿನಂತೆ<br><br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br>ಮೇಲಿನಂತೆ<br>ಮೇಲಿನಂತೆ | ಎಸ್.ಎ.ಎಸ್. ಭಾಗ– II ಪತ್ರಿಕೆ–2<br>ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–1<br>ಟ್ರೆಜರಿ ಅಕೌಂಟ್ಸ್ ಭಾಗ– II ಪತ್ರಿಕೆ–2 (ಪುಸ್ತಕಗಳಿಲ್ಲದೆ)<br>ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–2<br>ಎಸ್.ಎ.ಎಸ್ ಭಾಗ– II ಪತ್ರಿಕೆ–3<br>ಟ್ರೆಜರಿ ಅಕೌಂಟ್ಸ್ ಭಾಗ– II ಪತ್ರಿಕೆ–3 |
| 4. | ಮಂಗಳವಾರ | **28–06–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ | ಎಸ್.ಎ.ಎಸ್. ಭಾಗ– III ಪತ್ರಿಕೆ–1<br>ಎಸ್.ಎ.ಎಸ್. ಭಾಗ– III ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| 5. | ಬುಧವಾರ | **29–06–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br><br>ಮೇಲಿನಂತೆ | ಎಸ್.ಎ.ಎಸ್. ಭಾಗ– III ಪತ್ರಿಕೆ–3<br>ಎಸ್.ಎ.ಎಸ್. ಭಾಗ– III ಪತ್ರಿಕೆ–4 (ಪುಸ್ತಕಗಳಿಲ್ಲದೆ)<br>ಎಲೆಕ್ಟ್ರಿಸಿಟಿ(ಆಡಿಟ್ ಅಂಡ್ ಅಕೌಂಟ್ಸ್) ಲಾಸ್ ಲೋಯರ್ ಪರೀಕ್ಷೆ |
| 6. | ಗುರುವಾರ | **30–06–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ<br><br>ಮೇಲಿನಂತೆ<br>ಮೇಲಿನಂತೆ<br><br>ಮೇಲಿನಂತೆ<br>ಮೇಲಿನಂತೆ<br><br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br><br>ಮೇಲಿನಂತೆ | ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ ಹೈಯರ್ ಪರೀಕ್ಷೆ ಭಾಗ– I<br>ಎಸ್.ಎ.ಎಸ್ ಭಾಗ– III ಪತ್ರಿಕೆ–5<br>ಸೆಕ್ರೆಟೇರಿಯೆಟ್ ಮ್ಯಾನುಯಲ್ ಭಾಗ– I ಪತ್ರಿಕೆ–1<br>ಇಂಡಿಯನ್ ಕಾಂಟ್ರಾಕ್ಟ್ ಆಕ್ಟ್<br>ಕರ್ನಾಟಕ ಲೋಕಸೇವಾ ಆಯೋಗ ಮ್ಯಾನ್ಯುಯಲ್<br>ಸೆಕ್ರೆಟೇರಿಯೆಟ್ ಮ್ಯಾನುಯಲ್ ಭಾಗ– I ಪತ್ರಿಕೆ–2<br>ಕರ್ನಾಟಕ ಲೋಕಸೇವಾ ಆಯೋಗ ರಿಕ್ರೂಟ್‌ಮೆಂಟ್ ರೂಲ್ಸ್ |

**ಡಿ.ಎಸ್. ವಿಶ್ವನಾಥ**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

**ಕರ್ನಾಟಕ ಲೋಕಸೇವಾ ಆಯೋಗ," ಉದ್ಯೋಗ ಸೌಧ", ಬೆಂಗಳೂರು–560001.**

**ಅಧಿಸೂಚನೆ ಸಂಖ್ಯೆ ಇ.ಪ.(1)2972/2011–12/ಪಿಎಸ್‌ಸಿ, ದಿನಾಂಕ:23–03–2011**

**ಅನುಬಂಧ " ಬಿ "**

**2011ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳು**

**ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ**

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1 | 2 | 3 | 4 | 5 |
| 1. | ಸೋಮವಾರ | **04–07–2011** | ಬೆಳಿಗ್ಗೆ 10.00 ರಿಂದ 12–00 ಗಂಟೆ | ಅಕೌಂಟ್ಸ್ ಲೋಯರ್ |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಜನರಲ್ ಲಾ ಭಾಗ– **II** |
| 2 | ಮಂಗಳವಾರ | **05–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಜನರಲ್ ಲಾ ಭಾಗ– **I** ಪತ್ರಿಕೆ– **1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಜನರಲ್ ಲಾ ಭಾಗ– **I** ಪತ್ರಿಕೆ– **2** |
| 3. | ಬುಧವಾರ | **06–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಅಕೌಂಟ್ಸ್ ಹೈಯರ್ ಪತ್ರಿಕೆ–**1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಅಕೌಂಟ್ಸ್ ಹೈಯರ್ ಪತ್ರಿಕೆ–**2** |
| 4. | ಗುರುವಾರ | **07–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಕನ್ನಡ ಪತ್ರಿಕೆ–**1** (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2.00 ರಿಂದ ಸಂಜೆ 3.00 ಗಂಟೆ | ಕನ್ನಡ ಪತ್ರಿಕೆ–**2** (ಪುಸ್ತಕಗಳಿಲ್ಲದೆ) |
| 5. | ಶುಕ್ರವಾರ | **08–07–2011** | ಬೆಳಿಗ್ಗೆ 10.00 ರಿಂದ 1.00 ಗಂಟೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–**2** (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ– **I** ಪತ್ರಿಕೆ–**1**, (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ–**2** {ಪುಸ್ತಕಗಳಿಲ್ಲದೆ} |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ–**2**, |
| 6 | ಶನಿವಾರ | **09–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಲೇಬರ್ ಪತ್ರಿಕೆ–**1** |
| | | | ಮೇಲಿನಂತೆ | ಪ್ರಿಸನ್ಸ್ |
| | | | ಮೇಲಿನಂತೆ | ಎಕ್ಸೈಸ್ |
| | | | ಮೇಲಿನಂತೆ | ಮೋಟಾರ್ ವೆಹಿಕಲ್ಸ್ |
| | | | ಮೇಲಿನಂತೆ | ರೆವಿನ್ಯೂ ಹೈಯರ್ ಭಾಗ– **I** ಪತ್ರಿಕೆ–**1** |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–**1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00ಗಂಟೆ | ಲೇಬರ್ ಪತ್ರಿಕೆ–**2** |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–**2** |
| | | | ಮೇಲಿನಂತೆ | ರೆವಿನ್ಯೂ ಹೈಯರ್ ಭಾಗ– I ಪತ್ರಿಕೆ–**2** |
| 7. | ಭಾನುವಾರ | **10–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ರೆವಿನ್ಯೂ ಹೈಯರ್ ಭಾಗ– **II** ಪತ್ರಿಕೆ–**1** |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–**1** |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ– **I** ಪತ್ರಿಕೆ–**1** |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–**3** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ರೆವಿನ್ಯೂ ಹೈಯರ್ ಭಾಗ– **II** ಪತ್ರಿಕೆ–**2** |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–**2** |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ– **I**, ಪತ್ರಿಕೆ–**2** |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–**1** |

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| **1** | **2** | **3** | **4** | **5** |
| 8. | ಸೋಮವಾರ | **11–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪೊಲೀಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಕೋ–ಆಪರೇಷನ್ ಪತ್ರಿಕೆ**–1** |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ**–1** |
| | | | ಮೇಲಿನಂತೆ | ಮೈನಿಂಗ್ ಭಾಗ**– I** |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ**–1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ**– I,** ಪತ್ರಿಕೆ**–3** ಮತ್ತು – ಕೋ–ಆಪರೇಷನ್ ಪತ್ರಿಕೆ**–2** (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ**–3** |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ**–2** |
| | | | ಮೇಲಿನಂತೆ | ಮೈನಿಂಗ್ ಭಾಗ**– II** |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ**–2** |
| 9. | ಮಂಗಳವಾರ | **12–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಸಿರಿಕಲ್ಚರ್ ಪತ್ರಿಕೆ**–1** |
| | | | ಮೇಲಿನಂತೆ | ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ**– I** |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ**–3** |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ**–II** ಪತ್ರಿಕೆ**–1** |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ**–1** |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ**–1** |
| | | | ಮೇಲಿನಂತೆ | ಪೋರ್ಟ್ಸ್ ಹೈಯರ್ |
| | | | ಮೇಲಿನಂತೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ**–1** |
| | | | ಮೇಲಿನಂತೆ | ಯೂಥ್ ಸರ್ವೀಸಸ್ ಮ್ಯಾನ್ಯುಯಲ್ |
| | | | ಮಧ್ಯಾಹ್ನ 2.00ರ ರಿಂದ ಸಂಜೆ 4.00 ಗಂಟೆ | ಸಿರಿಕಲ್ಚರ್ ಪತ್ರಿಕೆ**–2** |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ**–I,**ಪತ್ರಿಕೆ**–2** |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ**–2** |
| | | | ಮೇಲಿನಂತೆ | ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ**–II** |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ**–II** ಪತ್ರಿಕೆ**–2** |
| | | | ಮೇಲಿನಂತೆ | ಪೋರ್ಟ್ಸ್ ಲೋಯರ್ |
| 10 | ಬುಧವಾರ | **13–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | **ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್‌ಲಾಸ್ ಪತ್ರಿಕೆ–1** |
| | | | ಮೇಲಿನಂತೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ**–3** |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ**–II,**ಪತ್ರಿಕೆ**–1** |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಲೋಯರ್ ಪತ್ರಿಕೆ**–1** |
| | | | ಮೇಲಿನಂತೆ | ಆಕ್ಟ್ಸ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಅಂಡ್ ಚೈಲ್ಡ್ ಡೆವೆಲಪ್‌ಮೆಂಟ್ |

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1 | 2 | 3 | 4 | 5 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | **ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್‌ಲಾಸ್ ಪತ್ರಿಕೆ–2** |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ–**II**, ಪತ್ರಿಕೆ–**2** |
| | | | ಮೇಲಿನಂತೆ | ಪ್ರೆಸ್‌ಮ್ಯಾನ್ಯುಯಲ್ ಲೋಯರ್ ಪತ್ರಿಕೆ–**2** |
| | | | ಮೇಲಿನಂತೆ | **ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಷನ್ ಪತ್ರಿಕೆ–1** |
| 11 | ಗುರುವಾರ | **14–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪಿ.ಡಬ್ಲ್ಯೂ.ಡಿ. ಲೋಯರ್ ಪತ್ರಿಕೆ–**1** |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ– **I** |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ–**1** |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ–**2** |
| | | | ಮೇಲಿನಂತೆ | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ–**1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಹೋಂ ಗಾರ್ಡ್ಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ– **II** |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ. ಲೋಯರ್ ಪತ್ರಿಕೆ–**2** |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ–**2** |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಷನ್ ಪತ್ರಿಕೆ–**3** |
| | | | ಮೇಲಿನಂತೆ | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ–**2** |
| 12 | ಶುಕ್ರವಾರ | **15–07–2011** | ಬೆಳಿಗ್ಗೆ 10.00 ರಿಂದ 12.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–1 |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಷನ್, ಪತ್ರಿಕೆ–**1** |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–**2** |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಷನ್, ಪತ್ರಿಕೆ–**2** |

**ಡಿ.ಎಸ್. ವಿಶ್ವನಾಥ**

ಕಾರ್ಯದರ್ಶಿ ಹಾಗೂ ನಿಯಂತ್ರಕರು,

ಇಲಾಖಾ ಪರೀಕ್ಷೆಗಳು,

ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.149

**ಕರ್ನಾಟಕ ಸರ್ಕಾರ**

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೇಮಕಾತಿ ಆದೇಶ**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಜವಾನರ (ಡಿ–ಗ್ರೂಪ್) ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21.11.2001 ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳು 2001 (ದಿನಾಂಕ:22.11.2001 ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ)

2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಅವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST–2–235/2003–04 ದಿನಾಂಕ:21.09.2010.

**ಪ್ರಸ್ತಾವನೆ:**

ಈ ಇಲಾಖೆಯ ಕೆಳಕಂಡ ಜಿಲ್ಲೆಯಲ್ಲಿ (ಡಿ–ಗ್ರೂಪ್) ಜವಾನರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳನ್ನು ಗುರುತಿಸಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಚಾಮರಾಜನಗರ ಜಿಲ್ಲೆ | ಒಂದು | ಇಲ್ಲ | ಒಂದು |

ಮೇಲೆ ಗುರುತಿಸಿದ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ ಕೆಳಕಂಡ ಅಭ್ಯರ್ಥಿಯನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಅವರ ಉಲ್ಲೇಖ (2)ರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಜವಾನರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ:20/2010–11, ದಿನಾಂಕ:28ನೇ ಫೆಬ್ರವರಿ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (2)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡುಬಂದ ಕೆಳಕಂಡ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಜಿಲ್ಲೆಯಲ್ಲಿ ಖಾಲಿ ಇರುವ ಜವಾನರ ಹುದ್ದೆಯಲ್ಲಿ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ.4800–100–6000–125–6500–150–7100–175–7275ರ ವೇತನ ಶ್ರೇಣಿಯಲ್ಲಿ ತಾತ್ಕಾಲಿಕವಾಗಿ ಜವಾನರೆಂದು ನೇಮಕ ಮಾಡಲಾಗಿದೆ. ಹಾಗೂ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ಜವಾನರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC / ST | ಜನ್ಮ ದಿನಾಂಕ | 3–7–2004ರ ಅಂತ್ಯಕ್ಕೆ ಅಭ್ಯರ್ಥಿಯ ವಯಸ್ಸು | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು | ಅಭ್ಯರ್ಥಿಯನ್ನು ಜವಾನರೆಂದು ನೇಮಕ ಮಾಡಿದ ಕಛೇರಿ | ಅಭ್ಯರ್ಥಿಯನ್ನು ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೋ ಅದರ ವಿವರ |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 1. | ಬಿ.ಜಿ. ಶಿವಪ್ಪ S/o B.M. ಗಂಗುಲಪ್ಪ, ಚಿಕ್ಕಬಣಹಳ್ಳಿ ಕಾಲೋನಿ, ಕನ್ನಮಂಗಳ ಪೋಸ್ಟ್, ಬಿದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು | SC | 28–11–1973 | 30–07–2005 | ಏಳನೇ ತರಗತಿ 91.167 | ಜಿಲ್ಲಾ ನೋಂದಣಿ ಕಛೇರಿ, ಚಾಮರಾಜನಗರ, ಚಾಮರಾಜನಗರ ಜಿಲ್ಲೆ. | ಪರಿಶಿಷ್ಟ ಜಾತಿ ಸಾಮಾನ್ಯ ಅರ್ಹತಾ ಅಭ್ಯರ್ಥಿ ಮುಖ್ಯಪಟ್ಟಿ |

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಯು ಈ ಕೆಳಕಂಡ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1) ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.

2) ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.

3) ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಪರೀಕ್ಷಾರ್ಥ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.

4) ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

5) ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

6) ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್ (ನಡತೆ) ನಿಯಮಗಳು 1966ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.

7) ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

8) ಅಭ್ಯರ್ಥಿಗಳು ಅವರ ಕಾರ್ಯ, ಕರ್ತವ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ತೃಪ್ತಿಕರವಾಗಿ ಮಾಡತಕ್ಕದ್ದು.

9) ಅಭ್ಯರ್ಥಿಗಳು ಅವರ ದುರ್ವರ್ತನೆಯಿಂದ, ದುರ್ನಡತೆಯಿಂದ ಹಾಗೂ ಉದಾಸೀನತೆಯಿಂದ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಿದಂತೆ ಉಂಟುಮಾಡುವ ಎಲ್ಲಾ ರೀತಿಯ ಆರ್ಥಿಕ ನಷ್ಟಗಳನ್ನು ಸರ್ಕಾರಕ್ಕೆ ಸದರಿ ಅಭ್ಯರ್ಥಿಗಳು ಭರಿಸಿಕೊಡಲು ಬದ್ದರಾಗಿರುತ್ತಾರೆ ಹಾಗೂ ಹೊಣೆಗಾರರಾಗಿರುತ್ತಾರೆಂದು ತಿಳಿಯತಕ್ಕದ್ದು.

10) ಅಭ್ಯರ್ಥಿಗಳು ಅವರ ಕರ್ತವ್ಯಗಳನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಗಳನ್ನು ಗುಪ್ತವಾಗಿಟ್ಟು ಅದರ ಗೌಪ್ಯತೆಯನ್ನು ಕಟ್ಟುನಿಟ್ಟಾಗಿ ಕಾಪಾಡತಕ್ಕದ್ದು.

11) ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.

12) ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

13) ಅಭ್ಯರ್ಥಿಗಳು ಸಲ್ಲಿಸಿರುವ ಆಯಾಯ ಮೀಸಲಾತಿ ಪ್ರಮಾಣ ಪತ್ರಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯಾಯ ಮೀಸಲಾತಿ category ಯಲ್ಲಿ ನೇಮಕ ಮಾಡಿರುವುದರಿಂದ ಸದರಿ ಅಭ್ಯರ್ಥಿಗಳು ಆಯಾಯ ಮೀಸಲಾತಿ categoryಗೆ ಸೇರಿದವರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

14) ಅಭ್ಯರ್ಥಿಗಳು ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.

15) ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಕೆಲಸಕ್ಕೆ ಹಾಜರಾದ ಕೂಡಲೇ ಮಾಡತಕ್ಕದ್ದು.

16) ಅಭ್ಯರ್ಥಿಯು ಕೆಳಕಂಡ ದಾಖಲೆಗಳನ್ನು ತಾವು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ತಪ್ಪದೇ ಹಾಜರುಪಡಿಸತಕ್ಕದ್ದು.

(1) ಅಭ್ಯರ್ಥಿಯು ತಮ್ಮ passport Size ನ ಎರಡು ಇತ್ತೀಚಿನ ಪೋಟೋ

(2) ವಿದ್ಯಾರ್ಹತೆಯ ಬಗ್ಗೆ ಏಳನೇ ತರಗತಿ ಮೂಲ ಅಂಕಪಟ್ಟಿ (Original)

(3) ಜನ್ಮ ದಿನಾಂಕದ ಬಗ್ಗೆ ಮೂಲ T.C. (Original)

(4) ಸಂಬಂಧಪಟ್ಟ ಸರ್ಕಾರಿ ಜಿಲ್ಲಾ ಸರ್ಜನ್‌ನಿಂದ ನಿಗದಿತ ನಮೂನೆಯಲ್ಲಿ ಪಡೆದ ವೈದ್ಯಕೀಯ ದೈಹಿಕ ಪ್ರಮಾಣ ಪತ್ರ (Original) (Physical Fitness Certificate)

(5) ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರ (Original)

17) ನೇಮಕಾತಿ ಹೊಂದಿದವರು ಕೆಳಕಂಡ ಮೀಸಲಾತಿ ದಾಖಲೆಗಳಲ್ಲಿ ಯಾವುದು ಅನ್ವಯವಾಗುವುದೋ ಅದನ್ನು ಅಂದರೆ

1) ಗ್ರಾಮೀಣ ಅಭ್ಯರ್ಥಿಗಳಾಗಿದ್ದಲ್ಲಿ ನಿಗದಿತ ನಮೂನೆ–2 ರಲ್ಲಿ ಗ್ರಾಮೀಣ ಮೂಲ ಮೀಸಲಾತಿ ಪ್ರಮಾಣ ಪತ್ರವನ್ನು,
2) ಕನ್ನಡ ಮಾಧ್ಯಮ ಅಭ್ಯರ್ಥಿಗಳಾಗಿದ್ದಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಇರುವ ನಿಗದಿತ ನಮೂನೆಯ ಮೂಲ ಪ್ರಮಾಣ ಪತ್ರವನ್ನು,
3) ಮಾಜಿ ಸೈನಿಕ ಅಭ್ಯರ್ಥಿಗಳಾಗಿದ್ದಲ್ಲಿ ಸೇನಾ ಬಿಡುಗಡೆ ಮೂಲ ಪ್ರಮಾಣ ಪತ್ರವನ್ನು,
4) ಯೋಜನಾ ನಿರಾಶ್ರಿತ ಅಭ್ಯರ್ಥಿಗಳಾಗಿದ್ದಲ್ಲಿ ನಿಗದಿತ ನಮೂನೆಯ ಯೋಜನಾ ನಿರಾಶ್ರಿತ ಮೂಲ ಪ್ರಮಾಣ ಪತ್ರವನ್ನು,
5) ಹಾಗೂ ಅಂಗವಿಕಲ ಅಭ್ಯರ್ಥಿಗಳಾಗಿದ್ದಲ್ಲಿ ಅಂಗವಿಕಲರೆಂಬುದಕ್ಕೆ ನಿಗದಿತ ನಮೂನೆ–ಎ ಮತ್ತು ನಮೂನೆ–ಬಿ ಯಲ್ಲಿ ನೀಡಿರುವ ಸರ್ಕಾರಿ ವೈದ್ಯಕೀಯ ಪ್ರಮಾಣ ಪತ್ರವನ್ನು

ಅಭ್ಯರ್ಥಿಗಳು ಮೇಲ್ಕಂಡವುಗಳಲ್ಲಿ ಯಾವುದು ಅನ್ವಯವಾಗುವುದೋ ಅದನ್ನು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಈ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.

**ಅಭ್ಯರ್ಥಿಗಳು ಕೆಳಕಂಡ ನಮೂನೆಗಳನ್ನು ಮತ್ತು ಮುಚ್ಚಳಿಕೆಗಳನ್ನು ಕೆಲಸಕ್ಕೆ ಹಾಜರಾಗುವ ಮುನ್ನ ತಪ್ಪದೇ ಬರೆದುಕೊಡತಕ್ಕದ್ದು**

18) ಅಭ್ಯರ್ಥಿಯು ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ಪ್ರತಿಜ್ಞಾ ವಿಧಿಯನ್ನು ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿ ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

19) ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಇದಕ್ಕೆ ಲಗತ್ತಿಸಿರುವ ನಮೂನೆಯಲ್ಲಿರುವ ಘೋಷಣಾ ಪತ್ರವನ್ನು ಕೆಲಸಕ್ಕೆ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರಿಗೆ ಬರೆದುಕೊಡತಕ್ಕದ್ದು.

20) ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/– ರೂ.ಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–1 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

21) ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–2 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

22) ಒಂದು ವೇಳೆ ನಾನು ಈ ಇಲಾಖೆಯಲ್ಲಿ ಜವಾನರೆಂದು ನೇಮಕಾತಿ ಹೊಂದುವ ಮೊದಲು ಅಥವಾ ನಾನು ಜವಾನರೆಂದು ನೇಮಕಾತಿ ಹೊಂದಿ ಈ ಇಲಾಖೆಯಲ್ಲಿ ಜವಾನರಾಗಿ ಸರ್ಕಾರಿ ಕೆಲಸಕ್ಕೆ ಹಾಜರಾದ ದಿನಾಂಕದ ನಂತರ ನಾನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ನಿರ್ಗಮಿಸುವ ದಿನಾಂಕದವರೆಗಿನ ಅವಧಿಯಲ್ಲಿ ಅಂದರೆ ನಾನು ಈ ಇಲಾಖೆಯಲ್ಲಿ ಸರ್ಕಾರಿ ನೌಕರನಾಗಿರುವ ಅವಧಿಯಲ್ಲಿ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯಾಗಲೀ ಅಥವಾ ಬೇರೆ ಇನ್ಯಾವುದೇ ಸಾರ್ವಜನಿಕರಾಗಲೀ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ನಾನು ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿಲ್ಲವೆಂದಾಗಲೀ ಅಥವಾ ನಾನು ಸಲ್ಲಿಸಿರುವ ಏಳನೇ ತರಗತಿಯ ಅಂಕಪಟ್ಟಿಯು ನಕಲಿ (ಖೊಟ್ಟಿ) ಎಂದಾಗಲೀ ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ಆಯ್ಕೆಯನ್ನು ಮತ್ತು ಈ ನನ್ನ ನೇಮಕಾತಿಯನ್ನು ಯಾವುದೇ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಶಾಶ್ವತವಾಗಿ ರದ್ದುಪಡಿಸುವುದಕ್ಕೂ ಹಾಗೂ ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ನನ್ನನ್ನು ಸರ್ಕಾರಿ ಸೇವೆಯಿಂದ ಶಾಶ್ವತವಾಗಿ ವಜಾ ಮಾಡುವುದಕ್ಕೂ ನಾನು ಒಪ್ಪಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು ರೂ.20/– ರೂ. ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–3 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

23) ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್. ನಾರಾಯಣ –VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ಮುಂಬರುವ ಸದರಿ ತೀರ್ಪಿನ ಪ್ರಕಾರ ಮಹಿಳಾ ಅಭ್ಯರ್ಥಿಗಳು ಜವಾನರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು

ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/– ರೂ. ಗಳ ಛಾಪಾ ಕಾಗದದಲ್ಲಿ ಇದಕ್ಕೆ ಲಗತ್ತಿಸಿರುವ ಮುಚ್ಚಳಿಕೆ ನಮೂನೆ–4 ಅನ್ನು ಕೆಲಸಕ್ಕೆ ಹಾಜರಾಗುವ ಮುನ್ನ ಈ ಕಛೇರಿಗೆ ಬರೆದುಕೊಡತಕ್ಕದ್ದು.

24) ಸರ್ಕಾರದವರು ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಗೆ ಬದಲಾಗಿ ದಿನಾಂಕ:01.04.2006 ರಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: FD (SPL)-04 PET 2005, ದಿನಾಂಕ:31.03.2006ರ ಆದೇಶದಲ್ಲಿ ಹೊಸದಾಗಿ New defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ:01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆ ಎಂದು ಆದೇಶ ಮಾಡಿರುತ್ತಾರೆ. ಆದ್ದರಿಂದ ಈ ಜಿಲ್ಲೆಯಲ್ಲಿ ನೇಮಕ ಹೊಂದಿದ ಸದರಿ ನೌಕರರು ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ದಿನಾಂಕ:31.03.2006ರ ಸದರಿ ಸರ್ಕಾರದ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ನೌಕರರು ಬದ್ಧರಾಗಿರತಕ್ಕದ್ದು.

ನೇಮಕಾತಿ ಪ್ರಾಧಿಕಾರಿ ಹಾಗೂ
ಜಿಲ್ಲಾ ನೋಂದಣಾಧಿಕಾರಿಗಳು,
ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್.105

## ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–01

## ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಆರ್(1)4363/2010–11/ಪಿಎಸ್‌ಸಿ, ದಿನಾಂಕ:28–03–2011**

ಔಷಧ ನಿಯಂತ್ರಣ ಇಲಾಖೆಯಲ್ಲಿನ ಜೂನಿಯರ್ ಸೈಂಟಿಫಿಕ್ ಆಫೀಸರ್ (ಕಿರಿಯ ರಸಾಯನ ತಜ್ಞರು) 65+–02 (ಬ್ಯಾಕ್‌ಲಾಗ್) ಹುದ್ದೆಗಳಿಗೆ ಆಯೋಗವು ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ–3/2009 ದಿನಾಂಕ:23.12.2009ರಲ್ಲಿ ಅಧಿಸೂಚನೆ ಹೊರಡಿಸಿ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದ ಭಾಗ–5ರಲ್ಲಿ ಅನುಕ್ರಮ ಸಂಖ್ಯೆ 658–724 ರಡಿ ಪ್ರಕಟಿಸಲಾಗಿರುತ್ತದೆ. ಈ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸಲು ದಿನಾಂಕ:29.01.2010 ಅನ್ನು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿತ್ತು. ಆದರೆ ಕರ್ನಾಟಕ ರಾಜ್ಯ ಔಷಧ ನಿಯಂತ್ರಕರ ಕಛೇರಿಯ ಪತ್ರ ದಿನಾಂಕ:26.02.2011 ರಲ್ಲಿ ಸದರಿ ಹುದ್ದೆಗಳನ್ನು ಮರು ಪರಿಶೀಲಿಸಿ ಸ್ಪಷ್ಟೀಕರಣದೊಂದಿಗೆ ಪರಿಷ್ಕೃತ ವರ್ಗೀಕರಣವನ್ನು ನೀಡಿರುತ್ತಾರೆ. ಆದ್ದರಿಂದ ದಿನಾಂಕ:23.12.2009ರ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿದ್ದ ಔಷಧ ನಿಯಂತ್ರಣ ಇಲಾಖೆಯಲ್ಲಿನ ಜೂನಿಯರ್ ಸೈಂಟಿಫಿಕ್ ಆಫೀಸರ್ (ಕಿರಿಯ ರಸಾಯನ ತಜ್ಞರು) 65+–02 (ಬ್ಯಾಕ್‌ಲಾಗ್) ಹುದ್ದೆಗಳ ವರ್ಗೀಕರಣವನ್ನು ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

| ಮೀಸಲಾತಿ | ಇ | ಮ | ಗ್ರಾ | ಮಾಸೈ | ಕಮಾಅ | ಅಂ.ವಿ. | ಒಟ್ಟು |
|---|---|---|---|---|---|---|---|
| ಪ.ಜಾ. | 02 | 03 | 02+1 (ಬ್ಯಾ.ಲಾ) | 01 | 01 | – | 09+01 (ಬ್ಯಾ.ಲಾ) |
| ಪ.ಪಂ. | 01 | 01 (ಬ್ಯಾ.ಲಾ.) | 01 | – | – | – | 02+01 (ಬ್ಯಾ.ಲಾ.) |
| ಪ್ರವರ್ಗ–1 | 01 | 01 | – | – | – | – | 02 |
| ಪ್ರ.2(ಎ) | 02 | 03 | 02 | 01 | 01 | – | 09 |
| ಪ್ರ.2(ಬಿ) | 01 | 01 | 01 | – | – | – | 03 |
| ಪ್ರ.3(ಎ) | 01 | 01 | 01 | – | – | – | 03 |
| ಪ್ರ.3(ಬಿ) | 01 | 01 | 02 | – | – | – | 04 |
| ಸಾ.ಅ. | 09 | 09 | 08 | 04 | 02 | 01** | 33 |
| **ಒಟ್ಟು** | **18** | **19+01 (ಬ್ಯಾ.ಲಾ.)** | **17+–1 (ಬ್ಯಾ.ಲಾ.)** | **06** | **04** | **01** | **65+02 (ಬ್ಯಾ.ಲಾ.)** |

** **ಶ್ರವಣದೋಷವುಳ್ಳ ಅಭ್ಯರ್ಥಿಗಳಿಗೆ**

ಮೇಲ್ಕಂಡ ಹುದ್ದೆಗಳ ವರ್ಗೀಕರಣದಲ್ಲಿ ಮಾತ್ರ ವ್ಯತ್ಯಯವಾಗಿದ್ದು ಉಳಿದಂತೆ ಹುದ್ದೆಗಳಿಗೆ ನಿಗದಿಪಡಿಸಿದ ವಿದ್ಯಾರ್ಹತೆ, ವೇತನ ಶ್ರೇಣಿ ಮತ್ತು ವಯೋಮಿತಿಗಳಲ್ಲಿ ಯಾವುದೇ ವ್ಯತ್ಯಯವಿರುವುದಿಲ್ಲ ಹಾಗೂ ದಿನಾಂಕ:23.12.2009ರ ಆನ್‌ಲೈನ್ ಅಧಿಸೂಚನೆಯಲ್ಲಿನ ಷರತ್ತುಗಳು ಯಥಾವತ್ ಮುಂದುವರಿಯುತ್ತವೆ. ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿದ್ದು ನೇಮಕಾತಿ ಪ್ರಾಧಿಕಾರದ ವಿವೇಚನೆಗೆ ಒಳಪಟ್ಟಿರುತ್ತದೆ.

**ಡಿ.ಎಸ್. ವಿಶ್ವನಾಥ**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.153